४. मम परिशोधनकर्मणि मार्गसूचकानां मन्युसूक्तपुनश्चरणक्रममातृका-दातॄणां **वीरनारायणाचार्याणाम्**

५. परिशोधनकर्मणि मार्गनिर्देशकानां **तिरुमलाचार्याणां**

६. ग्रन्थमिममामूलाग्रं दृष्ट्वा आवश्यकसूचनादात्रे सुहृदे रविकुमाराचार्याय, सवयस्याय **डि .माधवाचार्याय, कुलकर्णी वेङ्कटेशाचार्याय**

७. आङ्लभाषायां अनुवादकर्त्रे **सीतारामराव्** महोदयाय

८. ग्रन्थमिमं शुद्धतया सुन्दरं अक्षरविन्यासेन संयोजित्रे **के. सुब्बण्ण** महोदयाय च कार्तज्ञं निवेदयामि ।।

* * *

# ಪೀಠಿಕೆ

ಬ್ರಹ್ಮಕಾಂಡ, ಕರ್ಮಕಾಂಡ, ದೇವಕಾಂಡ ಎಂದು ವೇದವು ಮೂರು ಬಗೆ ಎಂದು ಕೆಲವರು ಹೇಳುತ್ತಾರೆ. ವಸ್ತುತಃ ಸಕಲವೇದಗಳೂ ಬ್ರಹ್ಮಪರವಾಗಿಯೇ ಇವೆ. ಇಮಾ ಉತ್ವಾ ಪಸ್ಪೃಧಾನಾಸೋ ಅತ್ರ ಮಂದ್ರಾ ಗಿರೋ ದೇವಯಂತೀ -ರುಪಸ್ಥುಃ ಎಂಬ ವೇದಮಂತ್ರದಲ್ಲಿ ವೇದಪುರುಷನ ಮಾತು ಇದು. ಹೇ ಇಂದ್ರನಾಮಕ ಭಗವಂತನೇ ! ಮಂದ್ರಾಃ =ಮಂದ್ರಸ್ವರೋಪೇತವಾದ ದೇವಯಂತಃ = ಮುಖತಃ ಇಂದ್ರಾದಿದೇವತಾಪ್ರತಿಪಾದಕವಾದರೂ ಸಹ , ಇಮಾ ಗಿರಃ = ವೇದವಾಕ್ಯಗಳು ಪಸ್ಪೃಧಾನಾಸಃ = ಸ್ತೋತ್ರಮಾಡುವ ವಿಷಯದಲ್ಲಿ ನಾನು ಮೊದಲು ನಾನು ಮೊದಲು ಎಂದು ಸ್ಪರ್ಧೆ ಮಾಡುತ್ತಾ, ತ್ವಾ ಉ = ನಿನ್ನನ್ನೇ ಉಪಸ್ಥುಃ = ಪರಮಮುಖ್ಯವೃತ್ತಿಯಿಂದ ಹಾಗೂ ಮಹಾತಾತ್ಪರ್ಯದಿಂದ ಪ್ರತಿಪಾದಿಸುತ್ತವೆ.

ಭಗವಂತನು ವೇದಗಳಿಗೆ ಪರಮಮುಖ್ಯಪ್ರತಿಪಾದ್ಯತ್ವೇನ ಆಶ್ರಯನಾದ್ದರಿಂದಲೇ ಆವನಿಗೆ ಶರಣ ಎಂಬ ಹೆಸರೂ ರೂಪವೂ ಇದೆಯೆಂದು ಬೃಹತೀಸಹಸ್ರವು ತಿಳಿಸುತ್ತಿದೆ. ಹೀಗೆ ಮುಖ್ಯವಾಗಿ ವೇದಗಳು ಭಗವಂತನ ಗುಣಗಳನ್ನು ಪ್ರತಿಪಾದನೆ ಮಾಡುತ್ತವೆ.

ಹೀಗೆ ತಿಳಿದು ವೇದವಿಚಾರ ಮಾಡಿದಾಗ ಜ್ಞಾನದ ಮೂಲಕ ಬ್ರಹ್ಮಪ್ರಾಪ್ತಿಯಾಗುತ್ತದೆ. ಬ್ರಹ್ಮಪ್ರಾಪ್ತಿ-ಮೋಕ್ಷ ಎರಡಕ್ಕೂ ಸಹ ಅವಿನಾಭಾವರೂಪ ಸಂಬಂಧವಿದೆಯಾದ್ದರಿಂದ ವೇದವು ಮೋಕ್ಷಪರವೂ ಆಗಿದೆ ಎಂದು ಹೇಳಬಹುದು.

ದೇವತೆಗಳು ಪರೋಕ್ಷಪ್ರಿಯರಾದ್ದರಿಂದ ವೇದವು ಪರೋಕ್ಷವಾಗಿಯೇ ಭಗವಂತನನ್ನು ಪ್ರತಿಪಾದಿಸುವುದು. ಇಂತಹ ಶಬ್ದಬ್ರಹ್ಮನ ಅಭಿವ್ಯಕ್ತಿ ಹೇಗೆಂದರೆ - **'भूतेषु घोषरूपेण'** ಎಂದು ಶ್ರೀಕೃಷ್ಣ ಹೇಳಿದಂತೆ. ಅಧ್ಯಾಪಕರ ಪಾಠದಿಂದ ಶಬ್ದಬ್ರಹ್ಮ- ವೇದವು ಶಿಷ್ಯ ಪರಂಪರೆಯನ್ನು ಬೆಳೆಸುತ್ತದೆ. ಮುಖ್ಯಪ್ರಾಣದೇವರು ೮೧ಭಾಷಾವೈಚಿತ್ರ್ಯಗಳಿಂದ ಕೂಡಿದ ಈ ವೇದರಾಶಿಯನ್ನು ರುದ್ರಾದಿದೇವತೆಗಳಿಗೆ

ಉಪದೇಶಿಸಿ ಆದರ ರಹಸ್ಯಾರ್ಥಗಳನ್ನು ತಿಳಿಸುತ್ತಾರೆ ಎಂದು ಭಾಗವತವು ತಿಳಿಸುತ್ತದೆ.

ವಸಿಷ್ಠಋಷಿಗಳು ವಿಶ್ವನಾಮಕವಾಯುದೇವರು ಭಗವಂತನು ವೇದಮುಖ್ಯಪ್ರತಿಪಾದ್ಯ ಎಂದು ನನಗೆ ಉಪದೇಶಿಸಿದರು ಎಂದು ಸ್ವಾನುಭವವನ್ನು ಶಿಷ್ಯಪರಂಪರೆಗೆ ಉಪದೇಶಿಸಿದ ಬಗೆಯನ್ನು ಧೇನುಂ ನತ್ವಾ ಎಂಬ ಮಂತ್ರದಲ್ಲಿ ಋಗ್ವೇದ ಉಲ್ಲೇಖಿಸುತ್ತದೆ

ಈ ಮುಖ್ಯಪ್ರಾಣದೇವರೇ ಶ್ರೀಮದಾಚಾರ್ಯರಾಗಿ ಅವತರಿಸಿ ಋಗ್ವೇದಕ್ಕೆ ಭಾಷ್ಯ ಬರೆದು ವೇದಾರ್ಥ ಚಿಂತನೆಯ ಮಾರ್ಗವನ್ನು ನಮಗೆ ತಿಳಿಸಿ ಕೊಟ್ಟಿದ್ದಾರೆ.

ಸಂಪ್ರದಾಯಾಗತವಾದ ಪರಮ ಪುರುಷನ ಪರವಿದ್ಯೆಗಾಗಿ ಮಾಡಿದ ಪ್ರಾರ್ಥನೆ - 'ಶಿಕ್ಷಾ ಶಚೀನಾಂ ಪತೇ ಪೂರ್ವೀಣಾಂ ಪೂರೂವಸೋ ' ಎಂದು ಕರ್ಮನಿರ್ಣಯದಲ್ಲಿ ಕಂಡು ಬರುತ್ತದೆ. ಯಾಸ್ಕರೂ ಸಹ ನಿರುಕ್ತದಲ್ಲಿ [೧೩-೧೨] 'ಅಯಂ ಮಂತ್ರಾರ್ಥಚಿಂತಾಭ್ಯೂಹೋಽಪಿ ಶ್ರುತಿತಃ ' ಎಂದು 'ಪರಂಪರಾಗತವಾದ ಅರ್ಥವನ್ನು ಗುರುಮುಖಾಂತರ ಶ್ರವಣ ಮಾಡಿ ತಿಳಿಯಬೇಕು'ಎಂದು ಹೇಳಿದ್ದಾರೆ. ಆದ್ದರಿಂದ ಜ್ಞಾನಿಗಳು,ಯತಿವರೇಣ್ಯರು ಮಾಡಿದ ವೇದವ್ಯಾಖ್ಯಾನವು ಸಜ್ಜನರಿಗೆ ಗ್ರಾಹ್ಯವಾದದ್ದು, ಕೇವಲ ಬುದ್ಧಿಕೌಶಲದಿಂದ, ಕೋಶಬಲದಿಂದ ಮಾಡಿದ ವ್ಯಾಖ್ಯಾನಗಳಲ್ಲಿ ಅಭಿಯುಕ್ತ ಸಮ್ಮತಿ ಕಂಡು ಬರುವುದಿಲ್ಲ.

ಉದಾಹರಣೆಗೆ -ಯಾಸ್ಕರು ನಿರುಕ್ತದಲ್ಲಿ [೧-೧೫] ಕೌತ್ಸ ಎಂಬ ಒಬ್ಬ ಆಚಾರ್ಯನ ಮತವನ್ನು ಮುಂದಿಟ್ಟಿದ್ದಾರೆ. ಕೌತ್ಸನ ಮತದಂತೆ 'ಅನರ್ಥಕಾಃ ಹಿ ಮಂತ್ರಾಃ । ತದೇತೇನ ಉಪೇಕ್ಷಿತವ್ಯಮ್' 'ಮಂತ್ರಗಳು ನಿರರ್ಥಕವಾದದ್ದು' ಎಂದು ಹೇಳಿ ಏಳು ರೀತಿಯ ಕಾರಣಗಳನ್ನು ಕೊಡುತ್ತಾರೆ. ಅದರಲ್ಲಿ ಒಂದು 'ಅವಿಸ್ಪಷ್ಟಾರ್ಥಃ ಮಂತ್ರಾಃ'. 'ಸೃಣ್ಯೇವ ಜರ್ಭರೀ' ಮುಂತಾದ ಮಂತ್ರಗಳ ಅರ್ಥವೇ ಅಸ್ಪಷ್ಟ.ಆದ್ದರಿಂದ ವೇದವು ಅಪ್ರಮಾಣ. ಈ ಮತವನ್ನು ತುಂಬ ಸುಂದರವಾಗಿ ನಿರುಕ್ತದಲ್ಲಿ ಖಂಡಿಸಲಾಗಿದೆ - 'ನೈಷ ಸ್ಥಾಣೋರಪರಾಧಃ । ಯದೇನಮಂಧೋ ನ ಪಶ್ಯತಿ । ಪುರುಷಾಪರಾಧಃ ಸ ಭವತಿ । ಯಥಾ ಜನಪದೀಷು

ವಿದ್ಯಾತಃ ಪುರುಷವಿಶೇಷೋ ಭವತಿ । ಪಾರೋವರ್ಯವಿತ್ಸು ಖಲು ವೇದಿತೃಷು ಭೂಯೋವಿದ್ಯಃ ಪ್ರಶಸ್ಯೋ ಭವತಿ'. ಅಂದರೆ ಪದಗಳ ಶಕ್ತಿ, ತಾತ್ಪರ್ಯ ಜ್ಞಾನವಿಲ್ಲದೇ ಅರ್ಥವಾಗದೇ ಇದ್ದರೆ ಅದು ಅಧ್ಯೇತೃದೋಷವಾಗುವುದೇ ಹೊರತು ಶಬ್ದದೋಷವಲ್ಲ. ನಿರುಕ್ತಾದಿಗಳ ಬಲದಿಂದ ಶಬ್ದಗಳನ್ನು ನಾವು ಅರ್ಥೈಸಿಕೊಳ್ಳಬೇಕು.ಹೀಗೆ ಕೌತ್ಸಮತದ ವಾದವನ್ನು ನಿರಾಕರಣೆ ಮಾಡಿ ಆಪಾತತಃ ಅಸ್ಪಷ್ಟವೆಂದು ತೋರಿದ ಮಂತ್ರಗಳನ್ನು ಅರ್ಥೈಸಿದ್ದಾರೆ.

ಇದೇ ವಿಷಯವನ್ನು ಶ್ರೀವಿಷ್ಣುತತ್ವನಿರ್ಣಯದ ವೇದಪ್ರಾಮಾಣ್ಯಪ್ರಕರಣ-ದಲ್ಲಿಯೂ ಹೇಳಲಾಗಿದೆ. ಅಲ್ಲಿ ಶ್ರೀವ್ಯಾಸತತ್ವಜ್ಞರು 'ಸೃಣ್ಯೇವ ಜರ್ಭರೀ' ಮುಂತಾದ ಮಂತ್ರವನ್ನು ಪ್ರಮಾಣಗಳ ಆಧಾರದಲ್ಲಿತಾವು ವ್ಯಾಖ್ಯಾನಿಸುವುದರ ಜೊತೆಗೆ ಈ ಮಂತ್ರಗಳ ಸಾಯಣಮಾಧವಾಚಾರ್ಯರ ವ್ಯಾಖ್ಯಾನಕ್ಕೆ ನಿರುಕ್ತದ ವಿರೋಧ ಮತ್ತು ವ್ಯಾಖ್ಯಾನದಲ್ಲಿರುವ ಅಕೌಶಲತೆಯನ್ನು ತೋರಿಸಿರುವರು.

ಇದರಂತೆ ಶ್ರೀಮದಾಚಾರ್ಯರು ತಿಳಿಸಿಕೊಟ್ಟಿರುವ ಪ್ರಮಾಣದ ಆಧಾರದಲ್ಲಿ ವೇದಾರ್ಥಚಿಂತನೆ ಮಾಡುವಾಗ ಸಾಯಣಭಾಷ್ಯದಲ್ಲಿ ಶಬ್ದಗಳಿಗೆ ಮಾಡಿರುವ ವ್ಯಾಖ್ಯಾನಕ್ಕೆ ನಿಗಮ,ನಿಘಂಟು,ನಿರುಕ್ತಾದಿಪ್ರಮಾಣಗಳ ವಿರೋಧವು ಸ್ಪಷ್ಟವಾಗಿ ತೋರುತ್ತದೆ. ಕೆಲವೊಂದು ಶಬ್ದಗಳಿಗೆ ಮಾತ್ರ ಉದಾಹರಣೆಯನ್ನು ಇಲ್ಲಿ ಸಂಗ್ರಹಿಸಲಾಗಿದೆ.

೧. '[೧೦-೮೬-೧]'ನೇ ಮಂತ್ರದ ವ್ಯಾಖ್ಯಾನದಲ್ಲಿ ಸಾಯಣಚಾರ್ಯರ ಪೂರ್ವಿಕರಾದ ವೆಂಕಟಮಾಧವಾಚಾರ್ಯರ ವ್ಯಾಖ್ಯಾನಕ್ಕೂ ಸಾಯಣಭಾಷ್ಯಕ್ಕೂ ಇರುವ ವ್ಯತ್ಯಾಸವನ್ನು ಸಾಯಣಭಾಷ್ಯದಲ್ಲಿಯೇ ಕಾಣಬಹುದು.

೨. 'ಕದಾ ವಸೋ' [೧೦-೧೦೫-೧] ಎಂಬ ಕೌತ್ಸ ಋಷಿ ದೃಷ್ಟವಾದ ಇಂದ್ರದೇವತಾಕ ಮಂತ್ರದಲ್ಲಿಯೂ ಶ್ರಾ ಶಬ್ದದ ವಿವರಣೆಯಲ್ಲಿ ನಿರುಕ್ತದ ವಿರೋಧವಿದೆ.

೩. [೧೦-೧೨೯-೩]' 'ಮಂತ್ರದಲ್ಲಿ'ತಮ ಆಸೀತ್' ಮುಂತಾದ ಸೃಷ್ಟಿವಾಕ್ಯಗಳಿಗೆ ಅಸತ್‌ನಿಂದ ಸೃಷ್ಟಿ ಹೇಳುವ ಅರ್ಥವನ್ನು ತತ್ವೋದ್ಯೋತಾದಿ ಗ್ರಂಥಗಳಲ್ಲಿ

ವ್ಯಾಸಸ್ಮೃತಿ ಮುಂತಾದ ಪ್ರಮಾಣವಚನಗಳ ಆಧಾರವನ್ನು ಕೊಟ್ಟು ಸಪ್ರಮಾಣವಾಗಿ ನಿರಾಕರಿಸಲಾಗಿದೆ.

೪. [೧೦-೧೩೩-೧]ಮಂತ್ರದಲ್ಲಿ 'ಅಭೀಕೇ' ಎಂಬ ಶಬ್ದಕ್ಕೆ ನಿರುಕ್ತದಲ್ಲಿಲ್ಲದಿರುವ ಅರ್ಥ ಮಾಡಲಾಗಿದೆ. ಅಭೀಕೇ = ಅಭ್ಯಕೇ ಅಭ್ಯಕ್ತೇ = ಅಭಿಮುಖ ಎಂದು ನಿರುಕ್ತದಲ್ಲಿ ಅರ್ಥ ಹೇಳಿದ್ದಾರೆ. ಅದರ ಬದಲಿಗೆ 'ಕೇಶಾಕೇಶ್ಯವಸ್ಥಾಯಾಮಪಿ' ಎಂದು ಅರ್ಥ ಮಾಡಿರುವುದು ನಿರುಕ್ತಾನುಸಾರಿಯಾಗಿಲ್ಲ.

೫. 'ತವತ್ಯ ಇಂದ್ರ' [೧೦-೧೩೮-೧] ಎಂಬ ಅಂಗರ್ಷಿದೃಷ್ಟವಾದ ಇಂದ್ರದೇವತಾಕವಾದ ಈ ಮಂತ್ರದಲ್ಲಿ ಪೋಥಾ ಶಬ್ದಕ್ಕೆ ದುರ್ಗಾಚಾರ್ಯರು ನಿರುಕ್ತದಲ್ಲಿ [೪-೨೫] ಮಾಡಿದ ಅರ್ಥಕ್ಕೂ ಸಾಯಣಭಾಷ್ಯಕ್ಕೂ ವಿರೋಧವಿದೆ.

೬. ಸಾಯಣಭಾಷ್ಯದಲ್ಲಿ ೧೦-೭೬ಸೂಕ್ತದಲ್ಲಿ ಇತಿ ಪೂರಣಃ ೧೦-೮೬ಸೂಕ್ತದಲ್ಲಿ ಹಿಇತಿ ಪೂರಣಃ , ಇತ್ಯಾದಿಯಾಗಿ ವೇದಮಂತ್ರಗಳಲ್ಲಿ ಕೆಲವು ಶಬ್ದಗಳು ಕೇವಲ ಛಂದೋಪೂರಕ ಎನ್ನಲಾಗಿದೆ. ಆದರೆ ಆಚಾರ್ಯರು 'ನ ವೇದೇಷು ಪದಂ ಕಿಂಚಿತ್ ವರ್ಣೋ ವಾ ವ್ಯರ್ಥ ಇಷ್ಯತೇ' ಎಂದು ವೇದಮಂತ್ರದ ಒಂದೊಂದು ಪದವೂ ಸಾರ್ಥಕ ಎಂದು ಪ್ರಮಾಣಪುಸ್ಸರವಾಗಿ ತಿಳಿಸಿರುವರು.

೭. ಕರ್ಮನಿರ್ಣಯಟೀಕಾದಲ್ಲಿಯೂ ಸಹ 'ಪ್ರಸಮುಪೋದಃ ಪೂರಣೇ ಇತ್ಯೇತದಸತ್' ಎಂದು ಪೂರಣಾರ್ಥವಾಗಿ ವೇದದಲ್ಲಿ ಶಬ್ದಗಳಿವೆ ಎಂಬ ವಾದವನ್ನು ನಿರಾಕರಿಸಲಾಗಿದೆ.

೮. ಇದರಂತೇ ಘರ್ಮಸೂಕ್ತದಲ್ಲಿ ಬಂದ 'ಸುಪೇಶಾ' ಎಂಬ ಶಬ್ದಕ್ಕೆ – 'ಪೇಶ ಇತಿ ರೂಪನಾಮ' [ನಿರುಕ್ತ - ೮-೧೧] ಎಂದು ರೂಪ ಎಂಬ ಅರ್ಥ ಮಾಡಲಾಗಿದೆ ಸಾಯಣಭಾಷ್ಯದಲ್ಲಿ ಮಾಡಿದ 'ಅಲಂಕಾರ' ಎಂಬ ಅರ್ಥ ನಿರುಕ್ತಾನನುಗುಣವಾಗಿದೆ.

ಇದರಂತೆ ಪ್ರಕೃತವಾದ ಘರ್ಮಸೂಕ್ತ-ಮನ್ಯುಸೂಕ್ತಗಳ ಸಾಯಣಭಾಷ್ಯಕ್ಕೆ ನಿಗಮ-ನಿರುಕ್ತಾದಿ ಪ್ರಮಾಣಗಳಲ್ಲಿರುವ ಕೆಲವೊಂದು ಅರ್ಥವಿರೋಧಗಳನ್ನು ಮಾತ್ರ ಇಲ್ಲಿ ಗುರುತಿಸುವುದರ ಜೊತೆಗೆ ಶ್ರೀಮದಾಚಾರ್ಯರ ದೃಷ್ಟಿಕೋನದಲ್ಲಿ

ಘರ್ಮಸೂಕ್ತ ಹಾಗೂ ಮನ್ಯುಸೂಕ್ತಗಳಿಗೆ ವಿಶಿಷ್ಟಾರ್ಥವನ್ನು ಓದುಗರಿಗೆ ನೀಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

* * * *

## ಘರ್ಮಸೂಕ್ತ

ಎಂಟನೆಯ ಅಷ್ಟಕದಲ್ಲಿ ಬರುವ ೧೦ ಋಕ್‌ಗಳ ಸೂಕ್ತ ಇದು.

ಸಾಮಾನ್ಯವಾಗಿ ಸೂಕ್ತಗಳನ್ನು ಯಾವ ಹೆಸರಿನಿಂದ ಕರೆಯಬೇಕು ಎಂದು ವಿಚಾರ ಮಾಡಿದಾಗ ಮೂರುರೀತಿಯಾಗಿ ಸೂಕ್ತದ ಹೆಸರನ್ನು ಶೌನಕರು ನಿರ್ದೇಶಿಸಿರುವರು. ಸೂಕ್ತಭಾಂಜಿಸೂಕ್ತ, ಋಗ್‌ಭಾಂಜಿಸೂಕ್ತ, ನೈಪಾತಿಕಸೂಕ್ತ ಎಂದು.

ಸೂಕಭಾಂಜಿ ಎಂದರೆ ಆ ಸೂಕ್ತದಲ್ಲಿ ಯಾವ ದೇವತೆಯನ್ನು ಸ್ತುತಿಸುತ್ತಾರೋ ಆ ಹೆಸರಿನಿಂದ ಸೂಕ್ತನಾಮವನ್ನು ಕರೆಯುವುದು. ಉದಾ- ಪುರುಷಸೂಕ್ತ. ಇದರಂತೆ ಮನ್ಯುಸೂಕ್ತವು ಸೂಕ್ತಭಾಂಜಿ ಸೂಕ್ತ ಎನಿಸಿಕೊಳ್ಳುತ್ತದೆ.

ಋಗ್‌ಭಾಂಜಿಸೂಕ್ತ ಎಂದರೆ ಸೂಕ್ತದ ಮಂತ್ರದ ಪ್ರಾರಂಭದಲ್ಲಿ ಯಾವ ಶಬ್ದವಿರುತ್ತದೋ ಆ ಹೆಸರಿನಿಂದ ಸೂಕ್ತವನ್ನು ಕರೆಯುವುದು. ಇಲ್ಲಿ ಸೂಕ್ತಪ್ರತಿಪಾದ್ಯದೇವತೆಯ ಉಲ್ಲೇಖ ಇರುವುದಿಲ್ಲ. ಇದರಂತೆ ಘರ್ಮಸೂಕ್ತವು ಋಗ್‌ಭಾಂಜಿಸೂಕ್ತ. ಘರ್ಮಶಬ್ದದಿಂದ ಈ ಸೂಕ್ತವು ಪ್ರಾರಂಭವಾಗುತ್ತದೆ.

ನೈಪಾತಿಕಸೂಕ್ತ ಎಂದರೆ - ನೈಪಾತಿಕವಾಗಿ ಪ್ರಾಸಂಗಿಕವಾಗಿ ಯಾವ ದೇವತೆಯ ಪ್ರಸ್ತಾವವಿರುತ್ತದೋ ಆ ಹೆಸರಿನಿಂದ ಸೂಕ್ತನಾಮವನ್ನು ಹೇಳುವದು. ವೈಶ್ವದೇವಸೂಕ್ತಗಳಲ್ಲಿ ಇದರ ಉದಾಹರಣೆಯನ್ನು ಕಾಣಬಹುದು.

ಈ ಘರ್ಮಸೂಕ್ತವನ್ನು ವೈಶ್ವದೇವ ಸೂಕ್ತವೆಂದು ಗಣನೆ ಮಾಡುತ್ತಾರೆ. ಬೃಹದ್ದೇವತೆಯಲ್ಲಿ ವೈಶ್ವದೇವ ಸೂಕ್ತದ ಸಾಮಾನ್ಯಲಕ್ಷಣವನ್ನು ಹೇಳುವಾಗ 'ಸ್ಯಾದ್ ವೈಶ್ವದೇವಂ ಬಹುದೇವತೇಷು' [೪-೭] ಎಂದು ಬಹುದೇವತಾಕಸೂಕ್ತ ಎನ್ನಲಾಗಿದೆ.

ಇದರ ಅವಾಂತರವಿಭಾಗವನ್ನು ನಾವು ಗಮನಿಸುವುದಾದರೆ ಈ ವೈಶ್ವದೇವಸೂಕ್ತಗಳನ್ನು 'ಸೂರ್ಯಸಂಸ್ತವಸಂಯುಕ್ತಂ ವಿಶ್ವಲಿಂಗಂ ಪೃಥಕ್‌ಸ್ತುತಿ' [೩-೪೨ಬೃ.ದೇ.]ಎಂದು ಮೂರು ರೀತಿಯಾಗಿ ವಿಂಗಡಿಸಿದ್ದಾರೆ.

೧. ಸೂರ್ಯನ ಸ್ತೋತ್ರವಿರುವ ಮಂತ್ರಗಳಿರುವ ಸೂಕ್ತ.

೨. ಎರಡನೆಯದು ವಿಶ್ವಲಿಂಗಂ. ಇದರ ಅರ್ಥವನ್ನು 'ಋಷಿಭಿರ್ದೇವತಾಃ ಸರ್ವಾಃ [ಬೃ.ದೇ.೨-೧೩೯]ಎಂದು ವಿವರಿಸಿದ್ದಾರೆ. ಅಂದರೆ ಒಟ್ಟಿಗೆ ಅನೇಕದೇವತೆಗಳನ್ನು ಉದ್ದೇಶಿಸಿ ಮಾಡಿದ ಸ್ತೋತ್ರವಿರುವ ಮಂತ್ರಗಳಿರುವ ಸೂಕ್ತ. ಯಾವ ಯಾವ ದೇವತೆಗಳು ಆನುಷಂಗಿಕವಾಗಿ ಸ್ತುತರಾಗುತ್ತಾರೆ ಎಂಬುದನ್ನು ಬೃ.ದೇ.೮ಅಧ್ಯಾಯದ ೧೨೪,೧೨೫,೧೨೬,೧೨೭,೧೨೮ನೇ ಶ್ಲೋಕ-ಗಳಲ್ಲಿ ತಿಳಿಸಿದ್ದಾರೆ.

೩. ಪೃಥಕ್‌ಸ್ತುತಿ ಪ್ರತ್ಯೇಕವಾಗಿ ಒಬ್ಬೊಬ್ಬ ದೇವತೆಗಳ ಸ್ತೋತ್ರವಿರುವ ಸೂಕ್ತ.

ಹೀಗೆ ಸಾಮಾನ್ಯರೀತಿಯಲ್ಲಿ ಇದು ವಿಶ್ವೇದೇವತೆಗಳಿಗೆ ಸಂಬಂಧಪಟ್ಟ ಸೂಕ್ತವಾದರೆ ವೈಷ್ಣವ ಸಿದ್ಧಾಂತದಂತೆ ಇದೂ ಸಹ ಭಗವಂತನ ಮಹಿಮಾ ಪ್ರತಿಪಾದಕವೇ ಆಗಿದೆ. 'ವಿಶ್ವೇದೇವತೆಗಳಲ್ಲಿ ಅದೇ ಹೆಸರಿನಿಂದ ಇರುವ ಭಗವಂತನನ್ನು ಸ್ತುತಿಸಿ ಜ್ಞಾನಿಯು ಮೋಕ್ಷ ಪಡೆಯುತ್ತಾನೆ 'ಎಂದು ಋಗ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ತಿಳಿಸಿರುವರು.

೧. ಘರ್ಮಸೂಕ್ತದಲ್ಲಿ ಪ್ರತಿಪಾದಿತವಾದ ವಿಷಯಗಳು ವಿಭಿನ್ನವಾದದ್ದು. ಶೌನಕರು ಘರ್ಮಸೂಕ್ತದ ವಿಷಯದಲ್ಲಿ [೮-೩೮]ಹೇಳುವಾಗ ಇಲ್ಲಿ ''ಇಂದ್ರ, ಮಧ್ಯಮಾಗ್ನಿ , ಹಾಗೂ ಛಂದಸ್ಸುಗಳ ಸ್ತುತಿ ಇದೆ ''ಎಂದು 'ಏಕೇ ಮನ್ಯಂತೇ ' ಎಂಬುದಾಗಿ ಮತ್ತೊಬ್ಬ ಋಷಿಗಳ ಮತವನ್ನೂ ಮುಂದಿಟ್ಟಿರುವರು. ಆದರೆ ಶ್ರೀಮದಾಚಾರ್ಯರ ಚಿಂತನೆಯಲ್ಲಿ ಇಲ್ಲಿ ಭಗವತ್ತತ್ವತ್ವದ ಪ್ರತಿಪಾದನೆಯೇ ಇರುವುದು.

ಮೊದಲನೆಯ ಮಂತ್ರದಲ್ಲಿ ಹೃದಯಗುಹೆಯಲ್ಲಿ ಇರುವ ಭಗವಂತನ ಎರಡು-ರೂಪಗಳ ಪ್ರಸ್ತಾವನೆ ಇದೆ.

ಬ್ರಹ್ಮಸೂತ್ರಭಾಷ್ಯದ ಗುಹಾಧಿಕರಣದಲ್ಲಿ ಬೃಹತ್ಸಂಹಿತಾವಾಕ್ಯವನ್ನುದಾಹರಿಸಿ ಭಗವಂತನ ಆತ್ಮಾ, ಅಂತರಾತ್ಮಾ ಎಂಬ ಈ ಎರಡು ರೂಪಗಳ ವಿವರಣೆಯನ್ನು ಶ್ರೀಮದಾಚಾರ್ಯರು ಕೊಟ್ಟಿರುವವರು. ಭಗವಂತನು ತನ್ನ ಮೂಲಸ್ವರೂಪದಿಂದ ಒಬ್ಬನೇ ಆದ್ದರಿಂದ ಅವನಲ್ಲಿ ಏಕತ್ವವಿದ್ದರೂ ರೂಪವಿಶೇಷದಿಂದ ದ್ವಿತ್ವವು ಭಗವಂತನಲ್ಲಿದೆ.

ಇದಕ್ಕೆ ಮೀಮಾಂಸಾಶಾಸ್ತ್ರದಲ್ಲಿಯೂ ದೃಷ್ಟಾಂತವನ್ನು ಕಾಣಬಹುದು. ಅಗ್ನೀಷೋಮೀಯ ಪಶುವನ್ನು ಹೇಳುವಾಗ ಅಧ್ರಿಗುಪ್ರೇಷಮಂತ್ರಗಳನ್ನು ಹೇಳಲಾಗಿದೆ. ಅಲ್ಲಿ 'ಮೇಧಪತಯೇ ಮೇಧಃ', 'ಮೇಧಪತಿಭ್ಯಾಂ ಮೇಧಮ್' ಎಂದು ಏಕವಚನದಲ್ಲಿ ,ಹಾಗೂ ದ್ವಿವಚನದಲ್ಲಿ ಮೇಧಪತಿಶಬ್ದವನ್ನು ಪ್ರಯೋಗಿಸಲಾಗಿದೆ. ಈ ಮೇಧಪತಿಶಬ್ದವಾಚ್ಯರಾದ ಅಗ್ನೀಷೋಮರಿಗೆ ದೇವತಾತ್ವೇನ ಏಕತ್ವ, ಹಾಗೂ ಅಧಿಷ್ಠಾನರೂಪೇಣ 'ಮೇಧಪತಿಭ್ಯಾಮ್' ಎಂಬ ದ್ವಿವಚನಾಂತಶಬ್ದವಾಚ್ಯತ್ವ[ದ್ವಿತ್ವ]ವನ್ನು ಹೇಳಿ, ದ್ವಿತ್ವ-ಏಕತ್ವಗಳಿಗೆ ಸಮುಚ್ಚಯವನ್ನು ಅಂಗೀಕರಿಸಲಾಗಿದೆ. ಅದರಂತೆ ಇಲ್ಲೂ ಸಹ ಸ್ವರೂಪೇಣ ಒಂದೇ ಆದ ರೂಪವೇ ಅಘಟಿತಘಟನಾಪಟೀಯವಾದ ಭಗವದೈಶ್ವರ್ಯಹಾಗೂ ವಿಶೇಷಬಲ-ದಿಂದ ರೂಪದ್ವಯ ವಾಚ್ಯವಾಗಿರುವುದು.

''ಏಕಂ ರೂಪಂ ಹರೇರ್ನಿತ್ಯಂ ಅಚಿಂತ್ಯೈಶ್ವರ್ಯಯೋಗತಃ ।
ಬಹುಸಂಖ್ಯಾಗೋಚರಂ ಚ ವಿಶೇಷಾದೇವ ಕೇವಲಮ್ ''

ಎಂಬೀ ಪ್ರಮಾಣವು ಇದನ್ನು ಪುಷ್ಟೀಕರಿಸುವುದು.

ಮತ್ತೊಂದು ಈ ಮಂತ್ರದಲ್ಲಿ ಪ್ರಸ್ತುತವಾದ ವಿಚಾರ -ದೇವತೆಗಳು ಭಾರತೀದೇವಿಯ ಮಕ್ಕಳು. ಇವರು ಭಗವಂತನ ತತ್ವಜ್ಞಾನಕ್ಕಾಗಿ ಹೃದಯಗುಹೆಯಲ್ಲಿರುವ ದ್ವಿರೂಪಿಯಾದ ಭಗವಂತನ ಬಳಿಗೆ ಬಂದರು ಎಂದು.

ಇದಕ್ಕೆ ಸಮಾಖ್ಯಾ ಹಾಗೂ ವಿವರಣೆ ಕರ್ಮನಿರ್ಣಯದಲ್ಲಿ ಕಾಣುತ್ತದೆ. 'ನದಂ ವ ಓದತೀನಾಮ್' ಎಂಬ ಋಙ್ಮಂತ್ರವನ್ನು ವ್ಯಾಖ್ಯಾನಿಸುವಾಗ ದೇವತೆಗಳು ಭಾರತೀದೇವಿಯ ಮಕ್ಕಳು ಹೇಗೆ ಎಂದು ಶ್ರುತಿಯನ್ನು ಉದಾಹರಿಸಿ

ತಿಳಿಸಿರುವರು. ವಾಗಭಿಮಾನಿಯಾದ ಭಾರತೀದೇವಿಯರು ಹಸುವಿನಂತೆ ಇದ್ದಾರೆ. ಹಸುವಿಗೆ ನಾಲ್ಕು ಕೆಚ್ಚಲುಗಳಿರುವಂತೆ ವೇದಾಭಿಮಾನಿನಿಯಾದ ಭಾರತೀದೇವಿ ಎಂಬ ಹಸುವಿಗೆ ಸ್ವಾಹಾಕಾರ, ವಷಟ್ಕಾರ, ಹಂತಕಾರ, ಸ್ವಧಾಕಾರ, ಎಂಬ ನಾಲ್ಕು ಕೆಚ್ಚಲುಗಳಿವೆ. ಅದರಲ್ಲಿ ಸ್ವಾಹಾಕಾರ ಹಾಗೂ ವಷಟ್ಕಾರ ಎಂಬ ಎರಡು ಕೆಚ್ಚಲುಗಳನ್ನು ಉಪಜೀವಿಸಿ ದೇವತೆಗಳಿದ್ದಾರೆ [ಹಂತಕಾರವನ್ನು ಮನುಷ್ಯರು ಹಾಗೂ ಸ್ವಧಾಕಾರವನ್ನು ಪಿತೃಗಳು ಉಪಜೀವಿಸುತ್ತಾರೆ.] ಎಂದು ವೇದಮಾತೆಯ ಪುತ್ರರು ದೇವತೆಗಳು ಎಂದು ಸುಂದರವಾಗಿ ವರ್ಣಿಸಿದ್ದಾರೆ.

## ಸಹ ಸಾಮಾನಂ ವಿಶೇಷಣದ ಔಚಿತ್ಯ -

ವಾಯುದೇವರು ಶಿಷ್ಯರಿಗೆ ಉಪದೇಶಿಸುತ್ತಾರೆ ಎಂದು ವೇದ ಹೇಳುತ್ತಿದೆ. ವಿ ಗೋಭಿರದ್ರಿಮೈರಯತ್ ಗೋಭಿಃ ವೇದವಾಕ್ಯೈಃ ವೇದವಾಕ್ಯಗಳಿಂದ ಅದ್ರಿಂ ಆದರಣೀಯಂ ಭಗವಂತಂ ವಿ ಐರಯತ್ ಶಿಷ್ಯೇಷು ಪ್ರಾವರ್ತಯತ್. ಇಲ್ಲಿ ಭಗವತ್ತತ್ವಗಳನ್ನು ತಿಳಿಯಲೋಸುಗ ವಾಯುದೇವರ ಸೇವೆಗಾಗಿ ದೇವತೆಗಳ ಆಗಮನವಾಗಿರುವುದು.

ವಾಯುದೇವರ ಬಳಿ ಬಂದು ವಾಯುದೇವರಿಂದ ಉಪದೇಶ ಪಡೆಯುವಂತೆ ಭಾರತೀದೇವಿಯರ ಬಳಿಯೂ ಸಹ ತತ್ತ್ವೋಪದೇಶ ಪಡೆಯುತ್ತಾರೆಂದು ತಿಳಿಯುತ್ತದೆ. ಗರುಡಾದಿ ದೇವತೆಗಳು ಭಾರತೀದೇವಿಯ ಪ್ರಸಾದದಿಂದ ಭಗವತ್ತತ್ತ್ವವನ್ನು ತಿಳಿಯುತ್ತಾರೆ ಎಂದು ಬ್ರಹ್ಮಾಂಡಪುರಾಣದ ಯಸ್ಯಾಃ ಪ್ರಸಾದಾತ್ ಪರಮಂ ವಿದಂತಿ ಶೇಷಃ ಸುಪರ್ಣೋ ಗಿರಿಶಃ ಸುರೇಂದ್ರಃ [ಮ.ಭಾ.ತಾ.ನಿ,]ಎಂಬ ವಚನವು ತಿಳಿಸುತ್ತಿದೆ. ಈ ಕಾರಣದಿಂದಲೇ ವಾಯುಸ್ತುತಿಯಲ್ಲಿ ಭಾರತೀದೇವಿಯರನ್ನು ಸ್ತುತಿಸುವಾಗ ವಾಚಾಂ ಯತ್ರ ಪ್ರಣೇತ್ರೀ ಎಂದು ವಿಶೇಷಣವನ್ನು ಕೊಡಲಾಗಿದೆ. ಇದಕ್ಕೆ ವಿಶ್ವಪತಿತೀರ್ಥರು ವ್ಯಾಖ್ಯಾನ ಮಾಡುತ್ತಾ ಸಕಲಶ್ರುತಿಸ್ಮೃತೀತಿಹಾಸಪುರಾಣಾದೀನಾಂ ದ್ವಿಜಫಣಿಪಮೃಡೇಂದ್ರಾದೀನ್ ಪ್ರತಿ ಉಪಕ್ರಮೋಪಸಂಹಾರಾದಿಷಡ್ವಿಧತಾತ್ಪರ್ಯಲಿಂಗೈಃ ಮುಖ್ಯವೃತ್ತ್ಯಾ ಶ್ರೀವಿಷ್ಣುಪರತ್ವೇನ ಪ್ರತಿಪಾದಯಂತೀ ಎಂದು ಹೇಳಿದ್ದಾರೆ.

## ೨. ಚತುರ್ವೇಣಿ ನಾರಾಯಣನ ರಮಣಿ

'ವಿಷ್ಣುನಾ ಸಹಿತಾ ಧಾತಾ ಸಾಪಿ ತುಷ್ಟಿಂ ಪರಾಂ ವ್ರಜೇತ್' ಎಂಬ ಪ್ರಮಾಣವಚನದಂತೆ ರಮಾದೇವಿಯನ್ನು ಭಗವಂತನೊಟ್ಟಿಗೇ ಚಿಂತಿಸಿದಲ್ಲಿ ಅವರ ಮಾಹಾತ್ಮ್ಯವನ್ನು ನಾವು ಸರಿಯಾಗಿ ತಿಳಿದಂತಾಗುತ್ತದೆ. ಶ್ರೀತತ್ತ್ವದ ಚಿಂತನೆ ಇಲ್ಲಿ ಎರಡನೆಯ ಹಾಗೂ ಮೂರನೆಯ ಮಂತ್ರಗಳಲ್ಲಿ ಕಂಡು ಬರುತ್ತದೆ.

ಎರಡನೆಯ ಮಂತ್ರದಲ್ಲಿ 'ನಿದಾನಮ್' =ಲಕ್ಷ್ಮೀದೇವಿಗೂ ಕಾರಣ' ಎಂದು ಭಗವಂತನನ್ನು ಸ್ತುತಿಸಲಾಗಿದೆ. ಇಲ್ಲಿ 'ಮಮ ಯೋನಿರಪ್ಸ್ವ ಅಂತಃಸಮುದ್ರೇ' ಎಂದು ವಾಗಂಭೃಣಿಯೇ ಹೇಳಿದ ಮಾತು ಸ್ಮರಣಾರ್ಹವಾದದ್ದು.

೩ನೆಯ ಮಂತ್ರದಲ್ಲಿ 'ಚತುಷ್ಕಪರ್ದಾ' ಎಂದು ಲಕ್ಷ್ಮೀದೇವಿಯನ್ನು ಕರೆಯಲಾಗಿದೆ. ನಾಲ್ಕು ರೀತಿಯಾಗಿ ಜಡೆಯನ್ನು ಹೆಣೆದು ಅಂದರೆ - ಬೈತಲೆಯ ಎರಡು ಪಾರ್ಶ್ವಗಳಲ್ಲಿ ಬಲದಿಂದ ಎಡಕ್ಕೆ ಒಂದು ಜಡೆ, ಎಡದಿಂದ ಬಲಕ್ಕೆ ಮತ್ತೊಂದು. ಹಾಗೂ ಸೀಮಂತದೇಶ [ಬೈತಲೆ] ಮತ್ತು ಹಿಂಬದಿ. ಹೀಗೆ ನಾಲ್ಕು ಕಡೆಗಳಲ್ಲಿ ತಮ್ಮ ಕೇಶಪಾಶವನ್ನು ಚತುರ್ಮೂರ್ತಿಯಾದ ಭಗವಂತನ ಪ್ರೀತಿಗಾಗಿ ಚತುರ್ವೇದೋಕ್ತ ಮಾಹಾತ್ಮ್ಯವತಿಯಾದ ರಮಾದೇವಿ ಧರಿಸಿರುವರು. ಇಂತಹ ದೇವಿಯನ್ನು ಚತುರಾಸ್ಯಾದಿ ದೇವತೆಗಳು ಸ್ತುತಿಸುತ್ತಾರೆ.

' ವೃಷಣೌ ' = ಭಕ್ತರ ಅಭೀಷ್ಟಪೂರಕ ಎಂದರ್ಥ.

'ಪ್ರಥ ' 'ಸಪ್ರಥ ' ಎಂಬ ಮತ್ಸದೇಶದ ಇಬ್ಬರು ರಾಜರಿಗೆ ವಸಿಷ್ಠರು ಮಾಡಿಸಿದ ಯಜ್ಞದಲ್ಲಿ 'ರಥಂತರ' ನಾಮಕಳಾದ ಲಕ್ಷ್ಮೀದೇವಿಯನ್ನು ಕಳುಹಿಸಿ ಅವರ ಅಭೀಷ್ಟವನ್ನು ಪೂರೈಸಿದ ಘರ್ಮನಾಮಕ ನರಸಿಂಹದೇವರ ಮಹಿಮೆಯನ್ನು ಶ್ರೀಮದಾಚಾರ್ಯರು ಐತರೇಯಭಾಷ್ಯದಲ್ಲಿ ಋಗ್ವೇದಸಂಹಿತೆಯ ವಚನದ ಮೂಲಕ ತಿಳಿಸಿದ್ದನ್ನು ಇಲ್ಲಿ ಸ್ಮರಿಸಬದುದು.

ಈ ಎರಡನೆಯ ಮಂತ್ರವನ್ನು ಐತರೇಯಆರಣ್ಯಕದಲ್ಲಿ ಶ್ರೀಮದಾಚಾರ್ಯರು ವ್ಯಾಖ್ಯಾನಿಸಿರುವರು. ಅಲ್ಲಿ ಮಾಡಿದ ವ್ಯಾಖ್ಯಾನದಂತೆ ಅರ್ಥ

ಚತುಷ್ಕಪರ್ದಾ = ನಾಲ್ಕು ಜಡೆಗಳನ್ನು ಹೆಣೆದು ಕೊಂಡಿರುವ, ಯುವತಿಃ = ನಿತ್ಯ ಯೌವನ ಸಂಪನ್ನೆಯಾದ, ಸುಪೇಶಾ = ಸುಕುಮಾರಿಯಾದ , ಘೃತಪ್ರತೀಕಾ = ಪ್ರಕಾಶಮಾನವಾಧ ಅಂಗಗಳುಳ್ಳ ಲಕ್ಷ್ಮೀದೇವಿಯು, ವಯುನಾನಿ = ಜ್ಞಾನವನ್ನು, ವಸ್ತೇ = ಆಭರಣದಂತೆ ಧರಿಸಿದ್ದಾಳೆ. ತಸ್ಯಾಮ್ = ಅಂತಹ ಲಕ್ಷ್ಮೀದೇವಿಯನ್ನು ಸುಪರ್ಣಾ = ಉತ್ತಮ ಆನಂದಪೂರ್ಣವಾದ, ವೃಷಣಾ = ಭಕ್ತರ ಅಭೀಷ್ಟವನ್ನು, ಸುರಿಸುವ ಭಗವಂತನ ಎರಡು ರೂಪಗಳು, ನಿಷೇದತುಃ = ರಮಣಮಾಡುತ್ತವೆ.

ಯತ್ರ= ಯಾವ ಭಗವಂತನಲ್ಲಿ ದೇವಾಃ = ದೇವತೆಗಳು ಭಾಗದೇಯಂ = ಸ್ವವಿಹಿತವಾದ ಕರ್ಮವನ್ನು, ದಧಿರೇ = ಸಮರ್ಪಣೆಮಾಡುತ್ತಾರೆ

ತಿಳಿದು ಬರುವ ವಿಶೇಷಾಂಶವೇನೆಂದರೆ ಅನ್ವಯ ಕ್ರಮದಲ್ಲಿ ವ್ಯತ್ಯಾಸ.

ಗೀತಾಭಾಷ್ಯದಲ್ಲಿಯೂ ಈ ಮಂತ್ರವನ್ನು ಆಚಾರ್ಯರು ಉಲ್ಲೇಖಿಸಿರುವರು. ಅಲ್ಲಿನ ಗೀತಾಭಾಷ್ಯದ ಪ್ರಮೇಯದೀಪಿಕಾಟೀಕಾನುಸಾರಿಯಾದ ಅನ್ವಯಕ್ರಮವನ್ನು ಅನುಸರಿಸಿ ಶ್ರೀಸತ್ಯಸಂಧರು ವ್ಯಾಖ್ಯಾನಿಸಿರುವರು.

ಶ್ರೀರಾಯರ ಐತರೇಯ ಖಂಡಾರ್ಥದಲ್ಲಿ ಹಾಗೂ ಶ್ರೀವಿಶ್ವೇಶ್ವರತೀರ್ಥೀಯ, ತಾಮ್ರಪರ್ಣೀಯ ವ್ಯಾಖ್ಯಾನಗಳಲ್ಲಿ ಮಾಡಿದ ಅನ್ವಯಕ್ರಮ ಬೇರೆ ರೀತಿ ಇದೆ. ಅದರಂತೆ ಯಚ್ಛಬ್ದ ತಚ್ಛಬ್ದಗಳಿಗೆ ಅರ್ಥವ್ಯತ್ಯಾಸವೂ ಸಹ ಇದೆ. ಹೇಗೆಂದರೆ - ಯತ್ರ ಎಂದರೆ = ದ್ವಿರೂಪಿಯಾದ ಭಗವಂತನಲ್ಲಿ ಕರ್ಮ ಸಮರ್ಪಿಸಿದರು. 'ತಸ್ಯಾಂ ನಿಷಣ್ಣಾ' 'ತಸ್ಯಾಂ' ಎಂಬುದಕ್ಕೆ ವಿಭಕ್ತಿ ವ್ಯತ್ಯಾಸ ಮಾಡಿ ತಾಂ = ಆ ರಮಾದೇವಿಯನ್ನು ನಿಷೇದತುಃ = ರಮಿಸಿದವು ಎಂದು ಅರ್ಥ ಮಾಡಲಾಗಿದೆ.

ವೃಷಣೌ ಎಂಬ ಶಬ್ದಕ್ಕೆ ಸನಾತ ಇಂದ್ರ ಎಂಬ ಬೃಹತೀಸಹಸ್ರಮಂತ್ರದ ವ್ಯಾಖ್ಯಾನದಲ್ಲಿ ಮೂಡಿ ಬಂದ ಎರಡು ಅರ್ಥಗಳು ಹೀಗಿವೆ.

ವೃಷಣೌ ಎಂದರೆ ಯುವಾನೌ ರೇತಃಸೇಚನಸಮರ್ಥೌ ಎಂದು. ಈ ಅರ್ಥವನ್ನು ತೆಗೆದು ಕೊಂಡಾಗ ಭಗವಂತನ ರೂಪಗಳು ರಮಣ ಮಾಡಿದವು ಎಂಬ ವಾಕ್ಯಕ್ಕೆ ಹೆಚ್ಚು ಸಾಂಗತ್ಯ ಬರುತ್ತದೆ. ಇದರಂತೆ ಲಕ್ಷ್ಮೀದೇವಿಗೆ ಕೊಡಲಾದ

ಯುವತಿಃ ಎಂಬ ವಿಶೇಷಣವೂ ತುಂಬಾ ಅರ್ಥಪೂರ್ಣವಾಗಿದೆಯೆಂದು ನಾವು ಅನುಸಂಧಾನ ಮಾಡಿಕೊಳ್ಳಬೇಕು.

ವೃಷಣೌ ಎಂದರೆ ಭಕ್ತ್ಯಾದಿಸೇಚಕೌ ವಾ ಎಂದು ಮತ್ತೊಂದು ಅರ್ಥ.

೩ ಮಂತ್ರದಲ್ಲಿ 'ವೇದ - ವೇದವೇದ್ಯ ಭಗವಂತನ ಸಂಬಂಧ. '

'ಪುರುಷರು ವೇದವನ್ನು ಅಧ್ಯಯನ ಮಾಡುವಾಗ ಪ್ರಾಣಸ್ಥನಾದ ವಿಷ್ಣುವು ವಾಗಿಂದ್ರಿಯದಲ್ಲಿ ಆಶ್ರಿತನಾಗುವನು. ಆಗ ವೇದವಾಚ್ಯನಾಗಿ ಅದರ ಅಧೀನನಾದಂತೆ ಕಾಣುತ್ತಾನೆ. ಆ ಅಧ್ಯಯನ ಕಾಲದಲ್ಲಿ ವಾಗಭಿಮಾನಿ ಸರಸ್ವತಿಯು ಭಗವಂತನನ್ನು ಅವನ ಗುಣಗಳನ್ನು ಅಭಿವ್ಯಕ್ತಿ ಮಾಡುವ ಮುಖಾಂತರ ಔಪಚಾರಿಕವಾಗಿ ತಾಯಿ ಎನಿಸಿಕೊಳ್ಳುವಳು. ಇದರಂತೆ - ಸರಸ್ವತ್ಯಭಿಮಾನ್ಯವಾದ ವೇದವ್ಯಂಗ್ಯನಾದ ಭಗವಂತನು ಪುತ್ರ ಎನಿಸುತ್ತಾನೆ. ಪುರುಷರು ಅಧ್ಯಯನವನ್ನು ನಿಲ್ಲಿಸಿದಾಗ , ನಿದ್ರೆ ಮಾಡಿದಾಗ ವಾಕ್ ಪ್ರಾಣನಲ್ಲಿ ಪ್ರಾಣಾಂತರ್ಗತ ಭಗವಂತನಲ್ಲಿ ಲೀನವಾಗುತ್ತದು. ಆಗ ಭಗವಂತನು ವಾಕಿನ ವಾಚಕತ್ವ ಶಕ್ತಿಯನ್ನು ಅಂತರ್ಧಾನಗೊಳಿಸುವನು. ಇದು ಭಗವಂತನು ವಾಕಿನ ಆಸ್ವಾದನೆ ಮಾಡಿದಂತೆ ''

೪. ನಾಲ್ಕನೆಯ ಮಂತ್ರದಲ್ಲಿ ಏಕ ಶಬ್ದಕ್ಕೆ ಪ್ರಧಾನ ಎಂಬ ಸತ್ಯಸಂಧರ ವ್ಯಾಖ್ಯಾನವು ತತ್ವಪ್ರಕಾಶಿಕಾನುಸಾರವಾಗಿ ಇರುವುದು. ಆದರೆ 'ಸ್ವಗತಭೇದ-ವಿವರ್ಜಿತ' ಎಂದು ರಾಯರು ಐತರೇಯಖಂಡಾರ್ಥದಲ್ಲಿ ಅರ್ಥೈಸಿರುವುದು ಹೆಚ್ಚು ಸಂಗತವಾಗುತ್ತದೆ ಎನಿಸುವುದು. ಹಿಂದೆ ದ್ವಿರೂಪಿಯಾದ ಭಗವಂತನ ಪ್ರಸ್ತಾವ ಬಂದಿರುವುದರಿಂದ ಇಲ್ಲಿ 'ಸಃ ' ಎಂದು ಅವನನ್ನು ಏಕವಚನದಿಂದ ಹೇಗೆ ಪರಾಮರ್ಶಿಸಲು ಸಾಧ್ಯ ಎಂಬ ಪ್ರಶ್ನೆಗೆ ಸ್ವಗತಭೇದವಿವರ್ಜಿತ ಎಂಬ ಅರ್ಥವು ಉತ್ತರ ರೂಪವಾಗಿದೆ.

'ಗ್ರಹಾನ್ ಸೋಮಸ್ಯ ಮಿಮತೇ ' '-

ಈ ಮಂತ್ರದಲ್ಲಿ ಬಂದ ಮತ್ತೊಂದು ವಿಷಯ ಸೋಮರಸಕ್ಕೆ ಸಂಬಂಧಿಸಿದ್ದು.

ಸೋಮಗ್ರಹ ಎಂದರೆ ಸೋಮರಸವನ್ನು ಗ್ರಹಣ ಮಾಡುವ ಪಾತ್ರವಿಶೇಷ. ಜ್ಯೋತಿಷ್ಟೋಮದಲ್ಲಿ ಒಟ್ಟು ೧೨ ಗ್ರಹ ಪಾತ್ರೆಗಳಿವೆ. ಈ ಗ್ರಹಪಾತ್ರೆಗಳನ್ನು ಯಜ್ಞದಲ್ಲಿ ಉಪಯೋಗಿಸುವಾಗ ಹೇಳಬೇಕಾದ ಪಾತ್ರಾಸಾದನ ಮಂತ್ರಗಳ ವಿವರಣೆ ತೈತ್ತಿರೀಯ ಸಂಹಿತೆಯ ಮೂರನೆಯ ಕಾಂಡದ ಮೊದಲನೆ ಪ್ರಪಾಠಕದಲ್ಲಿನ ಆರನೆಯ ನಿಗದಲ್ಲಿ 'ಅಗ್ನಿರ್ದೇವತಾ.....ಗಾಯತೀ ಛಂದಃ ಉಪಾಗ್ಂಶೋ ಪಾತ್ರಮಸಿ' ........ಧ್ರುವಸ್ಯ ಪಾತ್ರಮಸಿ ಎಂದು [ತೈ-ಸಂ -ಪು-೧೧೨]ಕಂಡು ಬರುತ್ತದೆ. ತೈತ್ತಿರೀಯ ಸಂಹಿತೆಯಲ್ಲಿ ಆರನೆಯ ನಿಗದದಲ್ಲಿ ಸೋಮಮಂತ್ರಬ್ರಾಹ್ಮಣವೆಂದೇ ಪ್ರಸಿದ್ಧವಾದ ಆರನೆಯಕಾಂಡದಲ್ಲಿ ಸೋಮ-ಕ್ರಯಣದ ವಿಧಿ, ಏಳನೆಯದರಲ್ಲಿ ಸೋಮಕ್ರಯಣ ಪ್ರಕಾರ ೮,೯,೧೦,೧೧ನೇ ನಿಗದಗಳಲ್ಲಿ ಇದರ ಹೆಚ್ಚಿನ ಮಾಹಿತಿಗಳು ಉಪಲಬ್ಧವಾಗುತ್ತವೆ.

## ಸೋಮದ ಇತಿಹಾಸ :-

ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪದಿಂದ ಈ ಸೋಮಲತೆಯನ್ನು ಸ್ವರ್ಗದಿಂದ ತರುತ್ತಿದ್ದಾಗ ಗಂಧರ್ವರು ಅದನ್ನು ಅಡ್ಡಿಪಡಿಸಿದರು. ಆದರೂ ಅದರ ಅಪಹಾರವಾಯಿತು. ಅದಕ್ಕಾಗಿ ಗಂಧರ್ವರಿಗೆ ಸೋಮಪಾನವು ನಿಷಿದ್ಧವಾಯಿತು ಎಂದು ಮೈತ್ರಾಯಣೀ ಸಂಹಿತೆ [ಮೈ.ಸಂ ೩-೮-೧೦,ಪುಟ. ೨೭೮] 'ಏತೇಭ್ಯೋ ವಾ ಆಧಿ ಛಂದಾಂಸಿ ಸೋಮ ವ್ಯಾಹರನ್ , ತೇ ಸೋಮ ಪೀಥೇನ ವ್ಯಾರ್ಧ್ಯತ 'ಎಂದು ಹೇಳುತ್ತಿದೆ. ಗಾಯತ್ರೀಛಂದಸ್ಸು ಸೋಮವನ್ನು ಅಪಹರಿಸುವಾಗ 'ವಿಶ್ವಾವಸು' ಎಂಬ ಗಂಧರ್ವ ಅದನ್ನು ತಾನು ಅಪಹರಿಸಿದ. ಅವನ ಬಳಿ ಮೂರು ರಾತ್ರಿ ಇತ್ತು. ದೇವತೆಗಳು ಗಂಧರ್ವರಿಗೆ ಸ್ತ್ರೀಯರನ್ನು ಕೊಟ್ಟು ಅದನ್ನು ಹಿಂತಿರುಗಿ ತಂದರು ಎಂದು ['೩-೭-೩'] ಮೈತ್ರಾಯಣೀ ಸಂಹಿತೆ ಉಲ್ಲೇಖಿಸುತ್ತದೆ. ಇಲ್ಲಿ ಪ್ರಸ್ತುತನಾದ ವಿಶ್ವಾವಸುವು ಭಾಗವತದಲ್ಲಿ [೧೧-೧೬- ] ಭಗವಂತನ ವಿಭೂತಿಪಾತ್ರನೆಂದು ವರ್ಣಿಸಲಾಗಿದ್ದಾನೆ.

## ಸೋಮ ಶಬ್ದದ ಅರ್ಥ

'ಓಷಧಿಃ ಸೋಮಃ ಸುನೋತೇಃ ಯದೇನ ಮಭಿಷುಣ್ವಂತಿ' [ನಿರುಕ್ತ] ಎಂದು ಒಂದು ವಿಧವಾದ ರಸ ಸುರಿಸುವ ಗಿಡ ಮೂಲಿಕೆಗೆ ಸೋಮ ಎಂದು ಹೆಸರು

ಎನ್ನಲಾಗಿದೆ. ಸೋಮಲತೆಯ ಕಾಂಡ = [ಇದಕ್ಕೆ 'ಪರ್ವನ್'ಎಂದೂ ಹೆಸರು]. ಇದು ದುಂಡಾದದ್ದು . ಇದರ ಬಣ್ಣ - ಬಿಳಿ ಹಾಗೂ ಕೆಂಪುಮಿಶ್ರವಾದ ವರ್ಣ. ಇದರ ಎಲೆಗಳು = ಶುಕ್ಲವರ್ಣ, ಸೋಮಲತೆಯ ಕುಡಿಗೆ 'ಅಂಸ' ಎಂದೂ, ಚಿಗುರಿರುವ ಕುಡಿಗೆ 'ವಷಣಾ' 'ವಾಗಾ' ಎಂದೂ ಹೆಸರು.

## ಸೋಮರಸ

'ಗ್ರಾವ' ಅಥವಾ 'ಅದ್ರಿ' ಎಂಬ ಹೆಸರಿನ ಕಲ್ಲಿನಿಂದ ಸೋಮಲತೆಯನ್ನು ಕುಟ್ಟಿ ರಸವನ್ನು ತೆಗೆಯುತ್ತಾರೆ. ಈ ಸೋಮರಸವನ್ನು ಒರಳಿನಲ್ಲಿ ಹಾಕಿ ರಸವನ್ನು ಮಾಡುತ್ತಾರೆ. ಈ ಒರಳಿಗೆ 'ಉಲೂಖಲ' ಎಂದು ಹೆಸರು. 'ದರ್ಶಪೂರ್ಣಮಾಸ' ಗ್ರಂಥದಲ್ಲಿ ಇದರ ಬಗ್ಗೆ ಹೇಳುವಾಗ ಇದು 'ವಾರುಣವೃಕ್ಷ' ಅಥವಾ 'ಉಂದುಂಬರ ವೃಕ್ಷ'ದಿಂದ ನಿರ್ಮಿತವಾಗಿರ ಬೇಕೆಂದು ಹೇಳಲಾಗಿದೆ. ಶುಲ್ಬ ಸೂತ್ರವು ಇದರ ಎತ್ತರ [ಪ್ರಾದೇಶಮಾತ್ರ ದ್ವಾದಶಾಂಗುಲ] ೧೨ಅಂಗುಲವೆನ್ನುತ್ತದೆ.

ಯಾಗದಲ್ಲಿ ದೇವತೆಗಳಿಗೆ ಸೋಮರಸವನ್ನು ಅರ್ಪಣೆ ಮಾಡುತ್ತಾರೆ. ಈ ಅರ್ಪಣೆ ಮಾಡುವ ಪಾತ್ರೆಯನ್ನು 'ಚಮೂ' ಎಂದು ಕರೆಯುತ್ತಾರೆ. ರಸಶೇಖರಿಸುವ ಪಾತ್ರೆಗೆ 'ಕೋಶ' 'ಸದಸ್ಥ' 'ದ್ರು' 'ವನ' 'ದ್ರೋಣ' ಮುಂತಾದ ಹೆಸರುಗಳಿವೆ. ಸೋಮಲತೆಯು 'ಮೂಜವಾನ್' ಎಂಬ ಪರ್ವತದಲ್ಲಿ ಸಿಗುವುದೆಂದು [೯-೮] 'ಮೌಜವತಃ ಸೋಮಃ' 'ಮೂಜವತಿ ಜಾತಃ' ಎಂದು ನಿರುಕ್ತದಲ್ಲಿ ಹೇಳಲಾಗಿದೆ.

ಸೋಮರಸದ ಜೊತೆ ಹಾಲನ್ನು ಸೇರಿಸಿದರೆ ಆದಕ್ಕೆ 'ಗವಾಶಿರ', ಮೊಸರನ್ನು ಸೇರಿಸಿದರೆ 'ದಧ್ಯಾಶಿರ' , ಯವವನ್ನು ಸೇರಿಸಿದರೆ 'ಯವಾಶಿರ' ಎಂದು ಕರೆಯುತ್ತಾರೆ. ಸೋಮರಸದ ಮಹಿಮೆಯನ್ನು ..........ನಿರುಕ್ತದಲ್ಲಿ [೧೧-೪] ತಿಳಿಸಿದ್ದಾರೆ.

## ತ್ರಿವಿಧ ಸೋಮ :-

ಅಧ್ಯಾತ್ಮ, ಅಧಿದೈವ , ಅಧಿಯಜ್ಞ ಎಂದು ಮೂರು ಬಗೆಯಾಗಿ ಸೋಮವನ್ನು ನಾವು ಚಿಂತಿಸಬಹುದು.

ಅಧಿಯಜ್ಞದಲ್ಲಿ . ಪ್ರಸಿದ್ಧವಾದ ಬಾಹ್ಯಯಜ್ಞಾಂಗವಾದ ಸೋಮಲತೆ.

ಅಧಿದೈವದಲ್ಲಿ ಸೋಮನೆಂದರೆ ಚಂದ್ರ, ಚಂದ್ರನು ಎಲ್ಲ ಓಷಧಿಗಳಿಗೂ ಅಧಿ- ಪತಿಯಾಗಿದ್ದಾನೆ. 'ಸೋಮ ಓಷಧೀನಾಮಧಿಪತಿಃ' ಎಂದು ಹೇಳುತ್ತದೆ. ಶತಪಥ ಬ್ರಾಹ್ಮಣವೂ ಸಹ 'ಚಂದ್ರಮಾ ವೈ ಸೋಮೋ ದೇವಾನಾಮನ್ನಂ ತಾ ಪೌರ್ಣಮಾಸ್ಯಾಮಭಿಷುಣ್ವಂತಿ' [೧೧-೧-೫-೩] ಎಂದು ಸೋಮ ಎಂದರೆ ಚಂದ್ರ ಎನ್ನುತ್ತದೆ. ಈ ಚಂದ್ರ ವಿಶೇಷವಾಗಿ ಸೋಮಲತೆಗೂ ಅಭಿಮಾನಿ.

ಅಧ್ಯಾತ್ಮದಲ್ಲಿ ಸೋಮ ಎಂದರೆ = ಮನಸ್ಸು . ಈ ಮನಸ್ಸಿಗೂ ಚಂದ್ರನೇ ಅಭಿಮಾನಿ. ಚಂದ್ರರಶ್ಮಿಗೆ ಅಭಿಮಾನಿಗಳು ಚಂದ್ರನ ಭೃತ್ಯರು ಅನೇಕರಿದ್ದಾರೆ. ಇವರೆಲ್ಲರಿಗೂ ಚಂದ್ರನಿಗೂ ಸಹ ಸೋಮನಾಮಕ ಭಗವಂತನೇ ಅಧಿಪತಿ.
'ಸೋಮಾನಾಂ ಮನಸಾಂ ಚೈವ ದೇವತಾಃ ಸೋಮರಶ್ಮಿಗಾಃ ।
ಸೋಮಭೃತ್ಯಾಃ ಸಮಸ್ತಸ್ಯ ಸೋಮ ಏವಾಭಿಧೋ ಹರಿಃ॥'

ಈ ಮನಸ್ಸಿನ ವೃತ್ತಿವಿಶೇಷಗಳು ಹಾಗೂ ಅದರ ಅಭಿಮಾನಿ ವಿಶೇಷದೇವತೆಗಳನ್ನು ಐತರೇಯಭಾಷ್ಯದಲ್ಲಿ ಶ್ರೀಮದಾಚಾರ್ಯರು ತಿಳಿಸಿರುವರು.

ಸ್ಥೂಲಮನಸ್ಸಿಗೆ ಇಂದ್ರದೇವರು, ಇದು ಯಜ್ಞಾದಿಗಳನ್ನು ಮಾಡಲು ಕಾರಣವಾದದ್ದು.

ಜ್ಞಾನಕಾರ್ಯಸಾಧನವಾದ ಮನಸ್ಸು 'ಸೂಕ್ಷ್ಮಮನಸ್ಸು' ಎನಿಸುತ್ತದೆ. ಗರುಡ -ಶೇಷ -ರುದ್ರರು ಇದಕ್ಕೆ ಅಭಿಮಾನಿಗಳು.

ವ್ಯಾಖ್ಯಾನ ಮಾಡುವ ಮನೋ ಅಂಶಕ್ಕೆ ಶೇಷದೇವರು, ಅಭಿಮಾನಿಗಳು.

ಧ್ಯಾನ ಮಾಡುವ ಮನಸ್ಸಿಗೆ ಗರುಡದೇವರು ಅಭಿಮಾನಿಗಳು.

ಭಾಗವತ ತಾತ್ಪರ್ಯದಲ್ಲಿ [೩-೨೬-೨೩] ಸ್ಮರಣಶೀಲವಾದ ಸಾತ್ವಿಕ ಚಿತ್ತಕ್ಕೆ ಬ್ರಹ್ಮದೇವರು ಅಭಿಮಾನಿ ಎನ್ನಲಾಗಿದೆ.

ಹಿಂದಿನ ಕರ್ಮವನ್ನು ಸ್ಮರಿಸುವ ಅಂತಃಕರಣವಿಶೇಷಕ್ಕೆ ಚಿತ್ತ [ಭಾ. ತಾ.೪-೨-೫೭].ಎಂದು ಹೆಸರು.

ಬಹುಸ್ಮರಣ ಶಕ್ತಿಗೆ 'ಚೇತನಾ', ಎಂದು ಹೆಸರು.

ನಿಶ್ಚಯ ಜ್ಞಾನಕ್ಕೆ ಕಾರಣವಾಗ ಬುದ್ಧಿಗೆ 'ಚಿತ್ತಿ' ಎಂದು ಶಬ್ದಗಳ ಅರ್ಥವನ್ನು ನಿರ್ಣಯಿಸುವ 'ಶಬ್ದನಿರ್ಣಯ' ಗ್ರಂಥದ ಆಧಾರದಲ್ಲಿ ಪ್ರಭೇದಗಳನ್ನು ಹೇಳಲಾಗಿದೆ.

### ಸೋಮಪಾನ

ಮನ್ಯುಸೂಕ್ತದಲ್ಲಿ ಮೊದಲನೇ ಸೂಕ್ತದ ಏಳನೇ ಮಂತ್ರದಲ್ಲಿ ಸೋಮಪಾನದ ವಿಚಾರವಿದೆ. ಇಲ್ಲಿ ನರಸಿಂಹನನ್ನು ಸೋಮಪಾನಕ್ಕಾಗಿ ಆಹ್ವಾನಿಸಲಾಗಿರುವುದನ್ನು ಸ್ಮರಿಸಬೇಕು.

ಆಚಾರ್ಯರು ಪ್ರಥಮಾಷ್ಟಕದ ಮೊದಲನೆಯ ಅಧ್ಯಾಯದ ೧೫ನೇ ಸೂಕ್ತದ 'ಇಂದ್ರ ಸೋಮಂ ಪಿಬ ಋತುನಾ' ಎಂಬ ಮಂತ್ರಕ್ಕೆ ವ್ಯಾಖ್ಯಾನ ಮಾಡುತ್ತಾ ಭಗವಂತ ಸೋಮಪಾನ ಮಾಡುವ ಕ್ರಮ ಅವನೊಟ್ಟಿಗೆ ಇರುವವರು ಯಾರು ಇತ್ಯಾದಿಗಳನ್ನು ಹೇಳಿದ್ದಾರೆ. ವಸಂತ ಮುಂತಾದ ಋತುಗಳಿಗೆ ಅಭಿಮಾನಿಗಳು ಹಾಗೂ ಕಾಲಾಭಿಮಾನಿದೇವತೆಗಳು ಇವರೊಟ್ಟಿಗೆ ಋತುಮಾರ್ಗದಲ್ಲಿ ಬಂದು ಸೋಮಪಾನ ಮಾಡು ಎಂದು ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸಲಾಗಿದೆ. ಈ ಋತುದೇವತೆಗಳು ಯಾರೆಂದರೆ ೧. ಇಂದ್ರ, ೨.ಮರುತರು, ೩. ಅಗ್ನಿ, ೪. ಮಿತ್ರಾವರುಣ, ೫. ಅಶ್ವಿನೀದೇವತೆಗಳು. ಈ ದೇವತೆಗಳನ್ನು ಉದ್ದೇಶಿಸಿಕೊಂಡೇ ಪಾತ್ರಾಸಾದನದಲ್ಲಿ ಸಹ ಪಾತ್ರೆಗಳನ್ನು ನಿರ್ದೇಶಿಸಲಾಗಿದೆ. ಮಹಾಭಾರತ-ತಾತ್ಪರ್ಯನಿರ್ಣಯದಲ್ಲಿಯೂ ಸಹ ಭೀಮಸೇನದೇವರು ಸೋಮಪಾನ-ದೋಪಾದಿಯಲ್ಲಿ ದುಃಶ್ಯಾಸನನ ರಕ್ತವನ್ನು ನರಸಿಂಹದೇವರಿಗೆ ಸಮರ್ಪಿಸಿರುವುದನ್ನು ಸ್ಮರಿಸಬೇಕು.

'೧-೨-೧'ರ ಋಗ್ಭಾಷ್ಯದಲ್ಲಿ ಹೇಳಿದಂತೆ ಯಜ್ಞದಲ್ಲಿ ಸೋಮಲತೆ ಅಲಂಕಾರಿಸಿದಂತೆ ಮನಸ್ಸು ಭಕ್ತಿಯಿಂದ ಅಲಂಕೃತವಾದಾಗ ಅದನ್ನು ಆ ಮನೋವೃತ್ತಿಗಳನ್ನು ಸ್ವೀಕರಿಸು ಎಂದು ನಾವು ಪ್ರಾರ್ಥಿಸಬೇಕು.

೬. ಆರನೆಯ ಮಂತ್ರದಲ್ಲಿ ಶಸ್ತ್ರಮಂತ್ರಗಳ ವಿಚಾರಬಂದಿದೆ.

ಶಸ್ತ್ರಮಂತ್ರ ಸಂಪಾದನ ಕ್ರಮವನ್ನು ಆಶ್ವಲಾಯನ ಶ್ರೌತಸೂತ್ರದ ಆರನೇ ಅಧ್ಯಾಯದ ೩ನೇ ಖಂಡದಲ್ಲಿ ಹೇಳಲಾಗಿದೆ. ಇದನ್ನು ಐತರೇಯ ಬ್ರಾಹ್ಮಣದಲ್ಲಿಯೂ ೪-೧-೩ ಖಂಡದಲ್ಲಿ ಹೇಳಲಾಗಿದೆ. ಶಸ್ತ್ರ ಎಂದರೆ - ಹೋತೃವು ಹೇಳುವ [ಅಪ್ರಗೀತ] ಗಾನ ಭಾಗವಲ್ಲದ ಮಂತ್ರಸಮೂಹ. ಬೇರೆ ಬೇರೆ ಮಂತ್ರಗಳಿಂದ ಒಂದೊಂದು ಭಾಗವನ್ನು ಸೇರಿಸಿಕೊಂಡು ಒಂದು ಮಂತ್ರವನ್ನಾಗಿಸುವ ವಿಧಾನಕ್ಕೆ ಶಸ್ತ್ರವೆನ್ನುತ್ತಾರೆ.

ಶಸ್ತ್ರಸಂಪಾದನಕ್ರಮ

ಗಾಯತ್ರೀ - ೮+೮+೮=೨೪ ಎಂಟಕ್ಷರದ ಮೂರು ಪಾದಗಳು.

ಪಂಕ್ತೀ = ೮+೮+೮+೮+೮ = ೪೦ ಎಂಟಕ್ಷರದ ಐದು ಪಾದಗಳು.

೧. ಗಾಯತ್ರೀ ಮೊದಲನೇ ಪಾದ ೮ ಅಕ್ಷರ ಹಾಗೂ; ಪಂಕ್ತಿಯ ಮೊದಲನೇ ಪಾದ ೮ ಅಕ್ಷರ ಸೇರಿ ಒಂದುಅನುಷ್ಟುಪ್‌ನ ಅರ್ಧ ಮಂತ್ರ.

ಹೀಗೆ ---

೨. ಗಾಯತ್ರೀ ೨ ಪಾದ ೮ ಅಕ್ಷರ,
ಪಂಕ್ತಿಯ ೨ ಪಾದ ೮ ಅಕ್ಷರ ಸೇರಿ ಒಂದು ಅನುಷ್ಟುಪ್‌ನ ಅರ್ಧ ಮಂತ್ರ.

೩. ಗಾಯತ್ರೀ ೩ನೇ ಪಾದ ೮ ಅಕ್ಷರ,
ಪಂಕ್ತಿ ೩ನೇ ೮ಅಕ್ಷರ ಪಾದಗಳು ಸೇರಿ ಅನುಷ್ಟುಪ್ ಅರ್ಧಮಂತ್ರ .

೪. ಪಂಕ್ತಿ ೪ ನೇ ಪಾದ ೮ ಅಕ್ಷರ, ಪಂಕ್ತಿ ೫ ನೇಪಾದ ೮ ಅಕ್ಷರ, ಸೇರಿ ಅನುಷ್ಟುಪ್ ಅರ್ಧ ಮಂತ್ರ .

ಹೀಗೆ ಗಾಯತ್ರಿಯ ೩ ಮಂತ್ರಗಳು ಪಂಕ್ತಿಯ ೩ ಮಂತ್ರಗಳು ಸೇರಿ ಒಟ್ಟು ೬ ಶಸ್ತ್ರ ಮಂತ್ರ

ಇದರಂತೆ - ಉಷ್ಣಿಕ್ = ೮+೮+೧೨ [೪+೮] = ೨೮ ಅಕ್ಷರಗಳು.

ಬೃಹತೀ = ೮+೮+೧೨+೮ = ೩೬ ಅಕ್ಷರಗಳು.

ಇಲ್ಲಿ ಶಸ್ತ್ರಸಂಪಾದನ ಕ್ರಮ ಹೀಗೆ —

೧. ಉಷ್ಣಿಕ್ ೧ನೇ ಪಾದ ೮ ಅಕ್ಷರ ,
ಬೃಹತೀ ೧ ನೇ ಪಾದ ೮ ಅಕ್ಷರ } ೮+೮=೧೬

೨. ಉಷ್ಣಿಕ್ ೨ನೇ ಪಾದ , ೮ ಅಕ್ಷರ
ಬೃಹತೀ ೨ನೇ ಪಾದ ೮ ಅಕ್ಷರ } ೮+೮= ೧೬

೩. ಉಷ್ಣಿಕ್ ೩ನೇ ಪಾದದಲ್ಲಿ ಮೊದಲ ೪ ಅಕ್ಷರ
ಬೃಹತಿಯ ೩ ನೇಪಾದ ೧೨ ಅಕ್ಷರ ಸೇರಿ} ೪+೧೨=೧೬

೪. ಉಷ್ಣಿಕ್ ನ ೩ನೇ ಪಾದದಲ್ಲಿ ಉಳಿದ ೮ ಅಕ್ಷರ,
ಬೃಹತೀ ೪ನೇ ಪಾದ ೮ ಅಕ್ಷರ ಸೇರಿ } ೮+೮=೧೬

ಇಲ್ಲಿ ಉಷ್ಣಿಕ್ ೩ ಮಂತ್ರ , ಬೃಹತೀ ೩ಮಂತ್ರಸೇರಿ ಒಟ್ಟು ೬ ಶಸ್ತ್ರಮಂತ್ರಗಳು.

ದ್ವಿಪದಾವಿರಾಟ್ = ೫+೫+೫+೫ = ೨೦ ಅಕ್ಷರಗಳು.

ತ್ರಿಷ್ಟುಪ್ = ೧೧+೧೧+೧೧+೧೧ = ೪೪ ಅಕ್ಷರಗಳು.

ಇಲ್ಲಿ ಕ್ರಮವಾಗಿ ವಿರಾಟ್‌ನ ಮೊದಲಪಾದಕ್ಕೆ, ತ್ರಿಷ್ಟುಪ್‌ನ ಮೊದಲನೇ ಪಾದ ಹೀಗೆ ಸೇರಿಸಿದಾಗ ೧೧+೫= ೧೬ ಅಕ್ಷರಗಳು ಅಂದರೆ ಅನುಷ್ಟುಪ್‌ಛಂದಸ್ಸಿನ ಅರ್ಧರ್ಕ ಆಗುತ್ತದೆ.

ದ್ವಿಪದಾ – ೪+೪+೪+೩ = ೧೫ ಅಕ್ಷರಗಳು.

ಜಗತೀ - ೧೨+೧೨+೧೨+೧೨ = ೪೮ ಅಕ್ಷರಗಳು.

ಇಲ್ಲಿ ೭ಅಕ್ಷರವನ್ನು ೪+೪ರಂತೆ ಹೇಗೆ ಭಾಗಮಾಡುವುದೆಂದರೆ

[ಇಲ್ಲಿ ಕಡೆಯ ಪಾದದಲ್ಲಿ ೩+೧೨= ೧೫ ಅಕ್ಷರಗಳು.ಇದನ್ನು ೪+೧೨=೧೬ರಂತೆ]

ಮೊದಲು ೪ಅಕ್ಷರವನ್ನು ವಿಭಾಗಿಸಿ ಆದರಲ್ಲಿನ ಕಡೆ ಅಕ್ಷರವನ್ನು ಮುಂದಿನ ೩ಅಕ್ಷರಗಳಿಗೆ ಸೇರಿಸಿ ೪ ಅಕ್ಷರವನ್ನಾಗಿಸಬೇಕು. ಈಗ ೧೨+೪ = ೧೬ ಅನುಷ್ಟಪ್‌ನ ಅರ್ಧಾರ್ಕ ಸಂಪಾದನೆ ಸ್ಪಷ್ಟ.

ಹೀಗೆ ಶಸ್ತ್ರಮಂತ್ರಗಳನ್ನು ಸಂಪಾದನೆ ಮಾಡುವಾಗ ವಿಶ್ವೇದೇವತಾಕ ಶಸ್ತ್ರಮಂತ್ರಗಳಿಗೆ ಹೆಚ್ಚಿನ ಮಹತ್ವವಿದೆ. ಒಟ್ಟು ೬ ಶಸ್ತ್ರಮಂತ್ರಗಳಿವೆ.

ಪ್ರಾತಃಸವನದಲ್ಲಿ ಎರಡು ಶಸ್ತ್ರಗಳು.

೧. ಅಗ್ನಿದೇವತಾಕವಾದ ಆಜ್ಯಶಸ್ತ್ರ, ೨. ಪ್ರಉಗ ಶಸ್ತ್ರ.

ಮಧ್ಯಂದಿನ ಸವನದಲ್ಲಿ ಎರಡು ಶಸ್ತ್ರಗಳು.

೧. ಮರುತ್ವತೀಯ ಹಾಗೂ ೨. ನಿಷ್ಕೇವಲ=ಅಂದರೆ ಕೇವಲ ಇಂದ್ರದೇವತಾಕವಾದದ್ದು.

ಸಾಯಂ ಸವನದಲ್ಲಿ - ಎರಡು ಶಸ್ತ್ರಗಳು.

೧. ವೈಶ್ವದೇವ ಹಾಗೂ ೨.ಅಗ್ನಿಮಾರುತ ಎಂದು.

ಇಲ್ಲಿ ಪ್ರಾತಃಸವನದ ಪ್ರಉಗ ಶಸ್ತ್ರಮಂತ್ರದಲ್ಲಿ ಉಕ್ತರಾದ ದೇವತೆಗಳು -

ಐಂದ್ರವಾಯವ, ಮೈತ್ರಾವರುಣ, ಅಶ್ವಿನೀದೇವತೆಗಳು, ಇಂದ್ರ,ಹಾಗೂ ವಿಶ್ವೇ-ದೇವತೆಗಳು. ಇವರು ಋತುಅಭಿಮಾನಿದೇವತೆಗಳು ಹಾಗೂ ಗ್ರಹಪಾತ್ರೆದೇವತೆಗಳೂ ಆಗಿದ್ದಾರೆ.

೯ನೇ ಮಂತ್ರ.

ಇಲ್ಲಿ - ವೇದಮಂತ್ರಗಳಲ್ಲಿರುವ ವಾಚ್ಯವಾಚಕಭಾವಸಂಬಂಧ ರೂಪ ಅರ್ಥ, ಅವುಗಳು ಭಗವಂತನನ್ನು ಯೌಗಿಕವಾಗಿ ತಿಳಿಸುವ ಕ್ರಮವನ್ನು ತಿಳಿಯುವ ವ್ಯಕ್ತಿ ಯಾರು ತಾನೇ ಇದ್ದಾರೆ ? ಎಂಬ ಮಾತಿಗೆ ' ಕಸ್ತ್ವಾ ಯುನಕ್ತಿ ? ಇತ್ಯಾಹ ಪ್ರಜಾಪತಿಃ ವೈ ಕಃ' ಎಂಬ ಬ್ರಾಹ್ಮಣವಾಕ್ಯವನ್ನು ಉದಾಹರಿಸಿ 'ವೇದಕ್ಕೆ ಮುಖ್ಯಾಧಿಕಾರಿಗಳಾಗಿ ಬ್ರಹ್ಮ ದೇವರಿದ್ದಾರೆ. ಅದರ ಯಥಾರ್ಥವನ್ನು ತಿಳಿಯಲು ಅವರು ಸಮರ್ಥರು' ಎಂದು ಅನುವ್ಯಾಖ್ಯಾನದಲ್ಲಿ ಪ್ರತಿಪಾದಿಸಿರುವರು. ಇಲ್ಲಿರುವ 'ಕಃ' ಎಂಬ ಶಬ್ದವು ಬ್ರಹ್ಮದೇವರನ್ನು ಹೇಳಲು ಹೊರಟಿದ್ದು .

ಈ ಮಂತ್ರದಲ್ಲಿ ವೇದಾಪೌರುಷೇಯತ್ವದ ಪ್ರತಿಪಾದನೆಯೂ ಸಹ ಇದೆ ಎಂದು ವಿಷ್ಣು ತತ್ವನಿರ್ಣಯದಲ್ಲಿ ಪ್ರತಿಪಾದಿಸಬಲಾಗಿದೆ. ಹೀಗಿರುವಾಗ ಸಾಯಣ ಭಾಷ್ಯದಲ್ಲಿ 'ಕಃ' ಎಂದರೆ ಯಾವನೊಬ್ಬನು ಗಾಯತ್ರ್ಯಾದಿ ಛಂದಸುಗಳ ಪ್ರಯೋಗವನ್ನು ತಿಳಿಯಲಾರ 'ಎಂದು ಅರ್ಥೈಸಿರುವುದು ಬ್ರಾಹ್ಮಣಗ್ರಂಥದ ಸಂವಾದಿಯಾಗಿಲ್ಲ ಎನ್ನುವುದು ಸ್ಪಷ್ಟ.

## ಮನ್ಯುಸೂಕ್ತಕ್ಕೆ ಆಚಾರ್ಯರ ಕೊಡುಗೆ.

ಶ್ರೀಮದಾಚಾರ್ಯರು ವ್ಯಾಖ್ಯಾನಿಸಿದ ೪೦ ಸೂಕ್ತಗಳಿಂದ ಹಾಗೂ ಇತರ ಸರ್ವಮೂಲ ಗ್ರಂಥಗಳಿಂದ ಮನ್ಯುಸೂಕ್ತದಲ್ಲಿ ಬಂದ ಕೆಲವು ಶಬ್ದಗಳಿಗೆ ನಾವು ವಿಶೇಷಾರ್ಥಗಳನ್ನು ಕಾಣಬಹುದಾಗಿದೆ. ಮೊದಲನೆಯದಾಗಿ

೧. ಶೌನಕರು ಬೃಹದ್ದೇವತೆಯಲ್ಲಿ -

''ಸಸೃಜೇ ಮಾಸಿ ಮಾಸ್ಯೇನಮಭಿಮತ್ಯ ತಪೋಗ್ರಜಮ್ । ತೇನೈನಂ ಮನ್ಯು-ರಿತ್ಯಾಹ ಮನ್ಯುರೇವ ತು ತಾಪಸಃ'' [೨-೫೩] ಎಂಬುದಾಗಿ ಮನ್ಯುದೇವತೆಯ ಸ್ವರೂಪವನ್ನು ಹೇಳಿದ್ದಾರೆ. ತಪಸ್ಸು ಮಾಡುವಾಗ ಪ್ರತಿ ಮಾಸದಲ್ಲಿಯೂ ಶಾಖವು

ಹೆಚ್ಚಿಸುವ ಮೂಲಕ ತಪಸ್ಸು ಮಾಡುವವರಲ್ಲಿ ಕೋಪ ಉಂಟಾಗಿಸುವ ಸ್ವಭಾವ ಈ ಮನ್ಯು ದೇವತೆಯದು ಎಂದು ಈ ಮನ್ಯುವಿನ ಸ್ವರೂಪ ತಿಳಿಸಿರುವರು. ಆದರೆ ಮನ್ಯು ಎಂದರೆ ಯಾರೋ ಒಬ್ಬ ಕ್ರೋಧಾಭಿಮಾನಿ ದೇವತೆಯಲ್ಲ. ಮನ್ಯು ಎಂದರೆ ಸರ್ವಜ್ಞನಾದ ನರಸಿಂಹದೇವರು ಎಂದರ್ಥ ಎಂದು ಮ.ಭಾ. ತಾ.ನಿರ್ಣಯದಲ್ಲಿ ತಿಳಿಸಿದ್ದಾರೆ.[1]

೨. ಶ್ರೀಮದಾಚಾರ್ಯರು ಮನ್ಯುಶಬ್ದವನ್ನು ನಿರ್ವಚನೆ ಮಾಡುವಾಗ 'ಮನು ಅವಬೋಧನೇ' ಎಂಬ ಧಾತುಪಾಠವನ್ನು ಕರ್ಮನಿರ್ಣಯದಲ್ಲಿ ಹೇಳಿದ್ದಾರೆ. ಕಾತಂತ್ರವ್ಯಾಕರಣಪಾಠ ಹಾಗೂ ಕ್ಷೀರಸ್ವಾಮಿಯ ಪಾಠ ಎರಡೂ ಇದೇ. ಕಾಶಕೃತ್ಸ್ನದಲ್ಲಿ 'ಮನು ಬೋಧನೇ' ಎಂಬ ಪಾಠ ಹೇಳಲಾಗಿದೆ. ಬೋಪದೇವನು 'ಮನು ಅವಬೋಧೇ' ? ಎಂಬ ಪಾಠವನ್ನು ಹೇಳಿ ಮನ್ಯುಶಬ್ದದ ನಿರ್ವಚನೆ ಮಾಡಿರುವರು. ಆಚಾರ್ಯರ ಉಲ್ಲೇಖಿಸಿದ ಧಾತುಪಾಠದ ವೈಶಿಷ್ಟ್ಯವೇನೆದರೆ ಸಾಯಣಭಾಷ್ಯದಲ್ಲಿ, ವಾಚಸ್ಪತ್ಯಾದಿಕೋಶಗಳಲ್ಲಿ ಮನ್ಯುಶಬ್ದದ ನಿರ್ವಚನೆ ಗಮನಿಸಿದಾಗ 'ಮನು ಜ್ಞಾನೇ' ಎಂಬ ಧಾತುವಿನ ಮೇಲೆ ಔಣಾದಿಕಯುಚ್ ಪ್ರತ್ಯಯವನ್ನು ಹೇಳಲಾಗಿದೆ. ಔಣಾದಿಕಪ್ರಕರಣಗಳಲ್ಲಿ ಧಾತ್ವರ್ಥಾನುಗಮ ಇಲ್ಲ. ಆದ್ದರಿಂದ ಮನ್ಯುಶಬ್ದಕ್ಕೆ ದೈನ್ಯ, ಕ್ರೋಧ ಎಂಬ ಅರ್ಥವೇ ಹೊರತು ಜ್ಞಾನಿ ಎಂಬ ಅರ್ಥ ಬರುವುದಿಲ್ಲ. ಈ ಸೂಕ್ತಪ್ರತಿಪಾದ್ಯನಾದ ಭಗವಂತನು ಮನ್ಯು= ಜ್ಞಾನಿ. ಸರ್ವಜ್ಞ.ಎಂಬ ಅರ್ಥವಿಶೇಷಕ್ಕಾಗಿ ಆಚಾರ್ಯರು ಈ ಧಾತುಪಾಠವನ್ನು ಉಲ್ಲೇಖಿಸಿದ್ದು.

ಸಿದ್ಧಾಂತದಲ್ಲಿ ಮನ್ಯು =ಎಂದರೆ ಕೋಪ ಎಂಬ ಅರ್ಥವೂ ಸಹ ಇದೆ. 'ಮಥ್ನಾತಿ ಕಲುಷೀಕರೋತಿ ಜ್ಞಾನಮ್' ಜ್ಞಾನವನ್ನು ಮರೆಮಾಚಿಸುವುದು ಇದು. ಮನ್ಯುನಾಮಕ ನರಸಿಂಹ ದೇವರು ಕ್ರೋಧನಿಯಾಮಕರಾದ್ದರಿಂದ ಅವರಿಗೆ ಕ್ರೋಧಾರ್ಥಕವಾದ ಮನ್ಯುಶಬ್ದದ ಸಮನ್ವಯವೂ ಸಹ ಸಿದ್ಧಾಂತದಲ್ಲಿ ಸಮ್ಮತವಾಗಿದೆ.

ಭಾಗವತದಲ್ಲಿ ಪ್ರಲ್ಹಾದರಾಜರು ನರಸಿಂಹನನ್ನು ಸ್ತುತಿಸುತ್ತ 'ತದ್‌ಯಚ್ಛ ಮನ್ಯುಂ' ಎಂದಿದ್ದಾರೆ. ನರಸಿಂದೇವರೇ ! ನೀವು ದುಷ್ಟಮೋಹನಾರ್ಥವಾಗಿ

1. ಮನ್ಯುವಿನ ಸ್ವರೂಪದ ವಿಷಯದಲ್ಲಿ ಸಂಸ್ಕೃತದ ಪೀಠಿಕೆ ನೋಡಿರಿ.

ತೋರಿಸುವ ಸ್ವೇದ, ಅಧರಸ್ಫುರಣ ಮುಂತಾದ ಲಕ್ಷಣಗಳುಳ್ಳ ಕೋಪವನ್ನು ಉಪಸಂಹಾರಮಾಡಿ ಪ್ರಸನ್ನತೆಯನ್ನು ತೋರಿಸಿ, ಮನ್ಯುಂ = ನಿಮ್ಮ ವಿಷಯದಲ್ಲಿ ಜ್ಞಾನವನ್ನು ಅನುಗ್ರಹಿಸಿರಿ, ಅಥವಾ ಮನ್ಯು =ಎಂದರೆ ಯಜ್ಞ, ಪೂಜಾರೂಪವಾದ ಯಜ್ಞವನ್ನು ಸ್ವೀಕರಿಸಿ ಎಂದು ವಿಜಯಧ್ವಜೀಯದಲ್ಲಿ ಅರ್ಥೈಸಲಾಗಿದೆ.

ಭೀಮಸೇನದೇವರು ಮಹಾಭಾರತಯುದ್ಧದಲ್ಲಿ ದುಶ್ಯಾಸನನನ್ನು ಸಂಹರಿಸಿ ಯುದ್ಧ ಎಂಬ ಯಜ್ಞದಲ್ಲಿ ಮನ್ಯುನಾಮಕ ನರಸಿಂಹದೇವರಿಗೆ ಸೋಮರಸದ ಸ್ಥಾನದಲ್ಲಿ ದುಶ್ಯಾಸನನ ಎದೆಯ ರಕ್ತವನ್ನು ಅರ್ಪಿಸಿದ್ದಾರೆ. ಹೀಗೆ ಶ್ರೀಮದಾಚಾರ್ಯರು ಮನ್ಯು ಎಂದರೆ ಜ್ಞಾನಿಯಾದ ನರಸಿಂಹ ಎಂಬ ಅರ್ಥ ವಿಶೇಷವನ್ನು ತಿಳಿಸಿರುವರು.

## ವಜ್ರಸಾಯಕ ಎಂಬ ವಿಶೇಷಣದ ಔಚಿತ್ಯ

ರಾಮದೇವರಿಗೆ ವಜ್ರಸಾಯಕ ಎಂಬ ವಿಶೇಷಣದ ಔಚಿತ್ಯವನ್ನು ವೇದಮಂತ್ರದಲ್ಲೇ ನಾವು ಕಾಣಬಹುದು. ಹವಂತ ಇಂದ್ರ ಎಂಬ ಮಂತ್ರದ ವ್ಯಾಖ್ಯಾನದಲ್ಲಿ ಮೂರುರೀತಿಯ ಅರ್ಥವನ್ನು ಈ ಶಬ್ದಕ್ಕೆ ನೀಡಿದ್ದಾರೆ. ಒಂದು ವಜ್ರಾಯುಧದಂತಿರುವ ಬಾಣವನ್ನು ಧರಿಸಿರುವವನು ಎಂದು.ಮತ್ತೊಂದು -ಭಗವಂತನು ವಜ್ರಾಯುಧವನ್ನೇ ಧರಿಸಿದ್ದಾನೆ.ಮತ್ತು ಬಾಣವನ್ನೂ ಧರಿಸಿದ್ದಾಲೆ ಎಂದು. ಶರೋ ಮುಸಲ ವಜ್ರೌ ಚ ಎಂಬ ತಂತ್ರಸಾರೋಕ್ತಲಕ್ಷಣದಂತೆ ಭಗವಂತನ ಕೈಯಲ್ಲಿ ವಜ್ರಾಯುಧವೂ ಸಹ ಇದೆ.

ಮತ್ತೊಂದು ಅರ್ಥ -ವಜ ಗತೌಎಂಬ ಧಾತುಪಾಠದಂತೆ ವಜಂ ಜ್ಞಾನಂ ರಾತಿ ಇತಿ ವಜ್ರಶಬ್ದವಾಚ್ಯಾಂ ಜ್ಞಾನಮುದ್ರಾಂ ಧರತೀತ್ಯರ್ಥಃ . ಭಕ್ತರಿಗೆ ಜ್ಞಾನವನ್ನು ನೀಡುವ ಜ್ಞಾನಮುದ್ರೆಯನ್ನು ಧರಿಸಿದವನ್ನು ಎಂದರ್ಥ.

ಶತ್ರುಸೈನ್ಯವು ಯುದ್ಧಕ್ಕೆ ಬಂದಾಗ ಭಕ್ತರ ರಕ್ಷಣೆಗಾಗಿ ಭಗವಂತನು ಅವರ ಮೇಲೆ ವಜ್ರಾಯುಧವನ್ನು ಬಿಟ್ಟು ಸಂಹರಿಸುತ್ತಾನೆ ಎಂದು ಆ ತೇ ಮಹ ಇಂದ್ರ ಎಂಬ ಮಂತ್ರದಲ್ಲಿ ಸ್ತುತಿಸಿರುವದನ್ನು ನಾವು ಕಾಣಬಹುದು.

೭ನೆಯ ಮಂತ್ರದಲ್ಲಿ ತತ್ತ್ವಜ್ಞಾನದ ಪ್ರಾರ್ಥನೆ ಇದೆ. 'ಜ್ಞಾನಂ ಶರಂ ಚ ದಧತಮ್ 'ಎಂಬ ತಂತ್ರಸಾರೋಕ್ತಲಕ್ಷಣದಂತೆ ರಾಮದೇವರು ಜ್ಞಾನಮುದ್ರೆಯನ್ನು ಧರಿಸಿ ಅದರಲ್ಲಿ ಬಾಣವನ್ನು ಧರಿಸಿರುವವರು. ಜ್ಞಾನಮುದ್ರೆಯನ್ನು ಧರಿಸಿರುವುದರಿಂದ ತತ್ತ್ವಜ್ಞಾನದ ಪ್ರಾರ್ಥನೆ ಹಾಗೂ ಬಾಣವನ್ನು ಧರಿಸಿರುವುದರಿಂದ ಶತ್ರುಸಂಹಾರದ ಪ್ರಾರ್ಥನೆ ಎರಡೂ ಸಮುಚಿತವಾಗಿದೆ.

ಇಲ್ಲಿ ರಾಮನನ್ನು ಸ್ತೋತ್ರ ಮಾಡಿರುವುದಕ್ಕೆ ಪೂರಕವಾಗಿ ವೇದಮಂತ್ರವೂ ಸಹ ರಾಮನನ್ನು ಸೇನಾನಾಯಕ ,ಶತ್ರುಸಂಹಾರಕ ಎಂದು ಸ್ತುತಿಸಿರುವುದು ಕಂಡು ಬರುತ್ತದೆ.

ವೃಷಾ ಜನಾನ ವೃಷಣಂ ರಣಾಯ [೭-೨೦-೫]- ದಶರಥ ವಸುದೇವ ಮುಂತಾದವರೇ ಭಗವಂತನ ತಂದೆ ತಾಯಿಗಳು. ಏಕೆಂದರೆ ರಾಮ ಕೃಷ್ಣಾದಿರೂಪಿಯಾದ ಭಗವಂತನನ್ನು ಶತ್ರುಗಳ ಮೇಲಿನ ಯುದ್ಧಕ್ಕಾಗಿ ಪ್ರಾರ್ಥಿಸಿ ಅವನ ಪ್ರಾದುರ್ಭಾವಕ್ಕೆ ಕಾರಣರಾಗಿದ್ದಾರೆ ಎಂದು ಹೇಳಿ , ಸೇನಾನೀಃ ಎಂಬ ಶಬ್ದಕ್ಕೆ ವ್ಯಾಖ್ಯಾನಿಸುವಾಗ ಭಗವಂತನು ಅವತಾರಗಳಲ್ಲಿ ಸೇನಾನಾಯಕನಾಗಿ ರಕ್ಷಿಸುತ್ತಾನೆ ಎಂದು ಅರ್ಥೈಸಿ ರಾಮನನ್ನು ಸೇನಾನೀಃ ಎಂದು ಕರೆದಿದ್ದಾರೆ.

೨. ಎರಡನೆ ಮಂತ್ರದಲ್ಲಿ ಶತ್ರುಸಂಹಾರ ಹಾಗೂ ಧನಪ್ರಾರ್ಥನೆ ಕಂಡು ಬರುತ್ತದೆ ಶತ್ರುಗಳೆಂದರೆ ಬಾಹ್ಯಶತ್ರುಗಳು ಹಾಗೂ ಆಂತರಿಕ ಶತ್ರುಗಳು ಎಂದು ಇಲ್ಲಿ ವ್ಯಾಖ್ಯಾನಿಸಲಾಗಿದೆ.

ಇದಕ್ಕೆ ಆಧ್ಯಾತ್ಮಿಕಾರ್ಥ - 'ತಮೂತಯೇ' ಎಂಬ ಮಂತ್ರಕ್ಕೆ ಭಾಷ್ಯದಲ್ಲಿ ಅರ್ಥ ತಿಳಿಸುವಾದ 'ಅಧ್ಯಾತ್ಮಂ ಪಾಪಾನಿ, ತಮಾಂಸಿ ವಾ' ಎಂದು ಪಾಪಗಳನ್ನು ಅಥವಾ ತಮಃಶಬ್ದೋಪಲಕ್ಷಿತ ಅಜ್ಞಾನವನ್ನು ಸಂಹರಿಸು ಎಂದು ಅರ್ಥ.[೧]

ಧನ ಪ್ರಾರ್ಥನೆಯ ಆಂತರ್ಯ :- 'ವಿದಾ ಮಘವನ್' ಎಂಬ ಮಂತ್ರದಲ್ಲಿ ಧನಾರ್ಥಕವಾದ 'ವಸು 'ಶಬ್ದಕ್ಕೆ 'ದೈವಂ ವಿತ್ತಂ ಜ್ಞಾನಮ್' ಎಂಬ ಕೋಶವನ್ನು

1. ಇಲ್ಲಿ ಬಂದ ಶತ್ರುಅರ್ಥಕವಾದ ಶಬ್ದಗಳು - ದಸ್ಯೂನ್ -, ೬ನೇ ಮಂತ್ರ 'ವೃತ್ರಾಣಿ' , ೭ನೇ ಮಂತ್ರ, ಆರ್ಯಂ -೫ ಮಂತ್ರ, ಅಭಿಮಾತಿ ೩ನೇ ಮಂತ್ರ. ಇವಗಳಿಗೂ ಹೀಗೇ ಅರ್ಥೈಸಬೇಕು.

ಉದಾಹರಿಸಿ ಜ್ಞಾನ ಎಂಬ ಅರ್ಥ ಮಾಡಿದ್ದಾರೆ. ಅದರಂತೆ ಇಲ್ಲಿಯೂ ಧನ ಪ್ರಾರ್ಥನೆ ಎಂದರೆ ಜ್ಞಾನಪ್ರಾರ್ಥನೆ.

ಇದೇ ಅರ್ಥದಲ್ಲಿ ಅನುತ್ತಮ ಎಂಬ ವಿ.ಸ.ನಾಮದ ಭಗವಂತರಾಯಕೃತ ವ್ಯಾಖ್ಯಾನದಲ್ಲಿ ಆನತಿ ಪ್ರಾಪ್ನೋತಿ ಉತ್ತಮಂ ಶತ್ರು ಸಂಬಂಧಿ ಗೋಹಿರಣ್ಯಾದಿಕಂ ಇತಿ ಅನುತ್ತಮಃ ಎಂದು ಅರ್ಥೈಸಲಾಗಿದೆ.

ಯುದ್ಧದಲ್ಲಿ ಶಿಕ್ಷಣೆ ನೀಡು ಎಂಬುದರ ತಾತ್ಪರ್ಯ ಮತ್ತೊಂದು ಋಜ್ ಮಂತ್ರದಲ್ಲೂ ಬಂದಿರುವುದನ್ನು ನಾವು ಕಾಣಬಹುದು. ಇಂದ್ರ ಶುಷ್ಮೋ ಎಂಬ ಮಂತ್ರದಲ್ಲಿ ಸಾತ್ವಿಕಜೀವರಿಗೆ ಶಿಕ್ಷಾ ಶಿಕ್ಷಕನಾಗಿರುವಿ ಎಂದರೆ ನೀನು ಗುರುಸ್ಥಾನದಲ್ಲಿದ್ದು ಉಪದೇಶವನ್ನು ಮಾಡುತ್ತೀಯೆ ಎಂದು ವ್ಯಾಖ್ಯಾನಿಸಲಾಗಿದೆ.

೨-೩ ಮಂತ್ರಗಳಲ್ಲಿ ಸ್ತೋತ್ರ ಮತ್ತು ಧನಪ್ರಾರ್ಥನೆ ಇದೆ. ಇವೆರಡೂ ಸಾಧ್ಯ-ಸಾದನಗಳು. ಭಗವಂತನು ಸ್ತೋತ್ರಮಾಡುವವರಿಗೆ ಧನಸಂಪತ್ತು ಬರುತ್ತದೆ ಎಂದು ಇದರ ತಾತ್ಪರ್ಯ. ಇದನ್ನು ವಸಿಷ್ಠದೃಷ್ಟವಾದ ರಾಯಸ್ಕಾಮೋ ಜರಿತಾರಂ ತ ಆಗನ್ ೦ಬ ಮಂತ್ರದಲ್ಲಿ ಕಾಣಬಹುದು.

ಮತ್ತು ಧನ ಎಂದರೆ ಮೋಕ್ಷಾಖ್ಯವಿತ್ತ ಎಂದು ನೂ ಇಂದ್ರ ರಾಯೇ ಎಂಬ ಮಂತ್ರದ ವ್ಯಾಖ್ಯಾನದಲ್ಲಿ ಕಾಣಬಹುದು. ಅಂತೆಯೇ ಧನ ಎಂದರೆ ಸ್ವರೂಪಚಿದಭಿವ್ಯಕ್ತಿ ಎಂಬ ಅರ್ಥವನ್ನೂ ಸಹ ಮಾಡಿದ್ದಾರೆ.ಅಂದರೆ ಧನವನ್ನು ಕೊಡು ಎಂದರೆ ಲಿಂಗಭವನ್ನು ಮಾಡಿ ಸ್ವರೂಪಸುಖವನ್ನು ಅಭಿವ್ಯಕ್ತಿ ಮಾಡು ಎಂದರ್ಥ.

೩. ಮೂರನೆಯ ಮಂತ್ರದಲ್ಲಿ 'ವಶೀ' ಎಂಬ ಶಬ್ದಕ್ಕೆ ಕರ್ಮನಿರ್ಣಯದಲ್ಲಿ 'ವಶೀ ಹಿ ಶಕ್ರಃ' ಎಂಬಲ್ಲಿ 'ಸ್ವತಂತ್ರ' ಎಂದು ಅರ್ಥ ಮಾಡಲಾಗಿದೆ.

೪. ದೇವರ ಆಗಮನದ ಪ್ರಾರ್ಥನೆ ೩,೫,೬,೭ ಈ ಮಂತ್ರಗಳಲ್ಲಿ ಇದೆ. ಭಗವಂತನ ವ್ಯಾಪ್ತ, ಅಪರಿಚ್ಛಿನ್ನ . ಅವನಲ್ಲಿ ಆಗಮನ ಕ್ರಿಯೆಯ ಪ್ರಾರ್ಥನೆ ಹೇಗೆ ಸೂಕ್ತ ಎಂಬ ಪ್ರಶ್ನೆಗೆ ಮಂತ್ರಾರ್ಥಮಂಜರೀಕಾರರು ಕೊಟ್ಟ ಉತ್ತರವನ್ನು ನಾವು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು.

ಅಕ್ಷರಾಧಿಕರಣದಲ್ಲಿ [ಬ್ರ.ಸೂ.ಭಾ ೧-೨-೧] ತಿಳಿಸಿದಂತೆ ಭಗವಂತನು ವ್ಯಾಪ್ತನೂ ಹೌದು. ಅಣುವೂ ಹೌದು. ಮಹತ್ವವೂ ವ್ಯಕ್ತವಾದಾಗ ಅಣುತ್ವವು ಶಕ್ತ್ಯಾತ್ಮನಾ ಇರುತ್ತದೆ. ಅಣುತ್ವದ ಅಭಿವ್ಯಕ್ತಿಯಾದಾಗ ಮಹತ್ವವು ಶಕ್ತ್ಯಾತ್ಮನಾ ಇರುತ್ತದೆ.[೧] ಹೀಗಾಗಿ ಭಗವಂತ ಪರಿಚ್ಛಿನ್ನ ರೂಪದಿಂದ ಭಕ್ತರು ಕರೆದಲ್ಲಿಗೆ ಬರುತ್ತಾನೆ.

೪ನೆಯ ಮಂತ್ರದಲ್ಲಿ ಎಲ್ಲರಿಗೂ ಯುದ್ಧದಲ್ಲಿ ಶಿಕ್ಷಣ ನೀಡು ಎಂಬ ಪ್ರಾರ್ಥನೆ ಇದೆ. ಇದರ ಆಧ್ಯಾತ್ಮಿಕಾರ್ಥ. ' ೧-೩-೧೦ ' ನೇ ಮಂತ್ರದ ಋಗ್ಭಾಷ್ಯದಂತೆ ಜ್ಞಾನಯುದ್ಧದಲ್ಲಿ ಶಿಕ್ಷಣೆಗಾಗಿ ಪ್ರಾರ್ಥನೆ.

ಇದೇ ಅರ್ಥದಲ್ಲಿ ' ಛಂದಾಸಿ ಚ ದಧತೋ ಅಧ್ವರೇಷು ' = ಎಂಬ ಘರ್ಮಸೂಕ್ತದ ವ್ಯಾಕ್ಯವನ್ನೂ ಅರ್ಥೈಸಬಹುದು. ಅಧ್ವರ ಎಂದರೆ ಯಾಗ. ಅಂದರೆ ಜ್ಞಾನಯಜ್ಞ. ಛಂದಸ್ಸು = ಎಂದರೆ ಅಶ್ವ = 'ಛಂದಾಸ್ಯಶ್ವಾಃ' ಅಶ್ವಶಬ್ದಕ್ಕೆ ಮನಸ್ಸು ಬುದ್ಧಿ ಎಂದು ಅರ್ಥವಿದೆ. ಮೇಧಾವಿಗಳು ಜ್ಞಾನಯಜ್ಞದಲ್ಲಿ ಮನಸ್ಸು ಹಾಗೂ ಬುದ್ಧಿಗಳನ್ನು ಭಗವಂತನೆಡೆಗೆ ಧರಿಸಿದ್ದಾರೆ.

ಋಜ್ ['೧-೩-೧೧']ಮಂತ್ರದಲ್ಲಿ ಹೇಳಿದಂತೆ ಎಲ್ಲ ಕರ್ಮಗಳಿಗೂ ವಾಕ್ ಹಾಗೂ ಬುದ್ಧಿಯೇ ಮೂಲ. ಇದನ್ನು ಧರಿಸಿರುವವರು ಎಂದರ್ಥ.

## ತವಸಃ ತವೀಯಾನ್

ತವಸ್ ಶಬ್ದದ ಅರ್ಥವನ್ನು ಋಗ್ಭಾಷ್ಯದಲ್ಲಿ ಯೋಗೇ ಯೋಗೇ ತವಸ್ತರಂ ಎಂಬ ಮಂತ್ರದಲ್ಲಿ ವ್ಯಾಖ್ಯಾನಿಸಿದ್ದಾರೆ. ತವಸ್ಎಂದು ಬಲಕ್ಕೆ ಹೆಸರಿರುವಂತೆ ತೇಜಸ್ಸಿಗೂ ಹೆಸರು. ಇಲ್ಲಿ ಮತುಬರ್ಥವು ಅಂತರ್ಣೀತವಾಗಿರುತ್ತದೆ. ಅಂದರೆ ತವಸ್ ಎಂದರೆ ತೇಜಸ್ವಿ ಎಂದರ್ಥ. ಛಾಂದೋಗ್ಯೋಪನಿಷತ್ತಿನ ತವೋರೂಪಃ ತ್ವಗುಚ್ಯತೇ ಎಂಬ ಭಾಷ್ಯವಾಕ್ಯಕ್ಕೆ ವೇದೇಶತೀರ್ಥರು ವ್ಯಾಖ್ಯಾನಿಸುವಾಗ ಪ್ರಕಾಶರೂಪ ಎಂದು ಅರ್ಥ ಮಾಡಿದ್ದಾರೆ. ಹೀಗೆ ತವಸಃ ತವೀಯಾನ್ ಎಂಬ ಶಬ್ದಕ್ಕೆ ತೇಜಸ್ವಿಗಳಿಗಿಂತಲೂ ತೇಜಸ್ವಿ , ಪ್ರಕಾಶವಂತರಲ್ಲಿ ಅತಿ ಪ್ರಕಾಶರೂಪಿ

---

1. ಈ ಶಕ್ತಿವ್ಯಕ್ತಿವಾದವನ್ನು ಟೀಕಾಚಾರ್ಯರು ನ್ಯಾಯಸುಧಾ ಜನ್ಮಾಧಿಕರಣದಲ್ಲಿ ವಿವರಿಸಿದ್ದಾರೆ.

ಎಂಬ ಅರ್ಥವಿಶೇಷವು ಇದರಿಂದ ತಿಳಿಯಬಹುದು. ೧೦-೮೧-೭ ಭಾಗವತಶ್ಲೋಕದ ಸತ್ಯಧರ್ಮೀರ್ಯದಲ್ಲಿ ತವಃ ಎಂಬ ಅಕಾರಾಂತ ಶಬ್ದವನ್ನೂ ಉಲ್ಲೇಖಿಸಲಾಗಿದೆ.

೭ನೆಯ ಮಂತ್ರದಲ್ಲಿ 'ವೃತ್ರಾಣಿ 'ಎಂಬ ಶಬ್ದವಿದೆ. ವೃತ್ರ = ಎಂದರೆ ಅಜ್ಞಾನ.'ಯದಿಮಾನ್ ಲೋಕಾನ್ ಆವೃಣೋತ್ ತದ್ ವೃತ್ರಸ್ಯ ವೃತ್ರತ್ವಮ್ ' ಎಂದು ಶ್ರುತಿ ವೃತ್ರಶಬ್ದದ ನಿರ್ವಚನವನ್ನು ಹೇಳಿದೆ. ಎಲ್ಲ ಜೀವರನ್ನು ಆವರಿಸಿರುವ ಅಜ್ಞಾನಕ್ಕೆ ವೃತ್ರ ಎಂದು ಹೆಸರು. ಇಂತಹ ಅಜ್ಞಾನವನ್ನು ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಪ್ರಾರ್ಥನೆ.

ಇದೇ ಅಭಿಪ್ರಾಯದಲ್ಲಿ ೧-೪-೮ ನೇ ಋಙ್ಮಂತ್ರವು ಹೊರಟಿದೆ. ಮನ್ಯುಸೂಕ್ತದಲ್ಲಿ ಸಾಧಕನು ಭಗವಂತನಿಗೆ ಹೇಳುವ ಮಾತಿದು. ಭಗವನ್ ಮನ್ಯುವೇ ! ನಿನಗೆ ಅತ್ಯಂತಪ್ರಿಯವಾದ ಸೋಮರಸವನ್ನು ಹೋಮಿಸುತ್ತೇನೆ. ನಾವು ಬಾಹ್ಯ-ಆಂತರಶತ್ರುಗಳನ್ನು ಸಂಹರಿಸೋಣ ಎಂಬುದಾಗಿ.

ಋಙ್ಮಂತ್ರದ ಅಭಿಪ್ರಾಯ -ಭಗವಂತನು ಯಾವ ಯಜ್ಞದಲ್ಲಿ ಸೋಮಪಾನ ಮಾಡುತ್ತಾನೋ ಅಂತಹ ಯಜ್ಞದಿಂದ ಆಗುವ ಭಗವತ್ ಪ್ರಸಾದದಿಂದ ಯಾಜಕನಿಗೆ ಮುಕ್ತಿಯಾಗುವುದು. ಇಂತಹ ಮುಕ್ತನಲ್ಲಿ ಭಗವಂತನು ಅಜ್ಞಾನದ ಸ್ಪರ್ಶವನ್ನೂ ಸಹಿಸುವುದಿಲ್ಲ.ಹಾಗೂ ಅವನನ್ನು ಮುಕ್ತಿಯ ಪೂರ್ವದಲ್ಲಿ ಜ್ಞಾನಾದಿವಿಷಯಕ ಯುದ್ಧದಲ್ಲಿ ರಕ್ಷಿಸಿ ಮುಕ್ತಿಯ ನಂತರದಲ್ಲಿ ಅವನನ್ನು ಎಲ್ಲ ಭೋಗದ ವಿಷಯದಲ್ಲಿ ರಕ್ಷಿಸುತ್ತಾನೆ ಎಂಬುದಾಗಿ.

೯ನೇ ಮಂತ್ರದಲ್ಲಿ 'ಏಧಿ' ಅಭಿವೃದ್ಧನಾಗು ಎಂದು ಪ್ರಾರ್ಥಿಸಲಾಗಿದೆ. ಇದರ ತಾತ್ಪರ್ಯ - '೧-೫-೮'ನೇ ಋಙ್ಮಂತ್ರದಲ್ಲಿ ಆಚಾರ್ಯರು ತಿಳಿಸಿದಂತೆ 'ಆಕಾಶವೃದ್ಧಿವದ್ ವೃದ್ಧಿಃ ವಿಷ್ಣೋಃ ಸ್ಯಾನ್ನೈವ ಚಾನ್ಯಥಾ ' ಭಗವಂತನಲ್ಲಿ ಯಾವುದೇ ರೀತಿಯ ಅಭಿವೃದ್ಧಿಯಾಗಲಿ ಅಪಕ್ಷಯವಾಗಲೀ ಇಲ್ಲ. ಮನೆಗೆ ಹಾಕಿದ ಛಾವಣಿ ತೆರೆದಾಗ ಆಕಾಶ ಹೆಚ್ಚು ಕಾಣುವುದು. ಆಗ 'ವೃದ್ಧೋ ಆಕಾಶಃ'ಎಂಬ ಪ್ರಯೋಗ ಮಾಡುವಂತೆ ಭಗವಂತನಲ್ಲಿ ಔಪಚಾರಿಕವಾಗಿ ಅಭಿವೃದ್ಧಿಶಬ್ದದ ಪ್ರಯೋಗ. ಮ.ಭಾ.ತಾ.ನಿರ್ಣಯದಲ್ಲಿ ತಿಳಿಸಿದಂತೆ 'ನಿತ್ಯ ಪ್ರವೃದ್ಧಸ್ಯ ಚ ತಸ್ಯ ವೃದ್ಧಿರಪೇಕ್ಷ್ಯ ಲೋಕಸ್ಯ ಹಿ ಮಂದದೃಷ್ಟಿಮ್'ಎಂದು ತಿಳಿದು ಕೊಳ್ಳಬೇಕು.

## ಪುನಶ್ಚರಣೆ

ಪುನಶ್ಚರಣೆಯಲ್ಲಿ [ವಿಲೋಮ] ಮಂತ್ರಗಳನ್ನು ಹಿಂದು ಮುಂದಾಗಿ ಹೇಳುವುದು ಸಂಪ್ರದಾಯದಲ್ಲಿದೆ. ಹೀಗೆ ಹೇಳಲು ಕಾರಣವನ್ನು ಶ್ರೀಮದಾಚಾರ್ಯರು 'ಸ್ವಾಧ್ಯಾಯತತ್ವ' ಎಂಬ ಗ್ರಂಥದ ಮೂಲಕ ನಿರ್ದೇಶಿಸಿರುವರು.

ಶಸ್ತ್ರ ಮಂತ್ರಗಳ ಸಂಪಾದನೆಯ ಉದ್ದೇಶ - ಈ ಮಂತ್ರಗಳೂ ಸಹ ಶಸ್ತ್ರ = ಆಯುಧದಂತೆ ಶತ್ರುಗಳನ್ನು ನಾಶ ಮಾಡಲಿ ಎಂದೂ ಹೀಗೆ ಯೋಜನೆ ಮಾಡಿದಾಗ ಬರುವ ಫಲ-ಮಂತ್ರಗಳನ್ನು ವಿಲೋಮದಲ್ಲಿ ಅಕ್ಷರ ಸಂಯೋಜನೆ ಮಾಡಿದರೆ ಅದು ಶತ್ರುನಾಶವನ್ನು ಮಾಡುತ್ತದೆ. ಪಾಪ ನಾಶಮಾಡುತ್ತದೆ. ಯಥಾಸ್ಥಿತವಾಗಿಯೇ ಶಸ್ತ್ರಮಂತ್ರವನ್ನು ಜಪಿಸಿದರೆ ಸಂಪತ್ತಿಲ್ಲದವರಿಗೆ ಸಂಪತ್ತನ್ನೂ , ಸಂಪತ್ತಿದ್ದವರಿಗೆ ಸಂಪತ್ತಿನ ಅಭಿವೃದ್ಧಿಯನ್ನೂ ಉಂಟು ಮಾಡುತ್ತದೆ. ಹೀಗೆ ಋಜ್ ಮಂತ್ರಗಳನ್ನು ಸಂಯೋಜನೆ ಮಾಡಿದರೆ ಬರುವ ಫಲವನ್ನು ಹೇಳಿದ್ದಾರೆ. ಅದರಂತೆ ಮನ್ಯುಸೂಕ್ತದ ಜಪ ಹಾಗೂ ಪುನಶ್ಚರಣೆಗಳಿಂದ ನಮಗೆ ಸಂಪತ್ತು ಹಾಗೂ ಪಾಪನಾಶ ಎರಡು ಲಭಿಸುವುದು.

ಮನ್ಯುಸೂಕ್ತವನ್ನು ಪುನಶ್ಚರಣೆ ಮಾಡುವಾಗ ಮೊದಲನೆ ಮಂತ್ರದ ಮೊದಲ ಪಾದ ಹಾಗೂ ಕಡೆಯ ಮಂತ್ರದ ಕಡೆಯಭಾಗವನ್ನು ಉಚ್ಚರಿಸುತ್ತಾ ಪಾದಶಃ ಒಮ್ಮೆ ಪೂರ್ಣಸೂಕ್ತವನ್ನು ಪಠಿಸಿ ಮತ್ತೆ ಅರ್ಧಮಂತ್ರವನ್ನು ಹೀಗೆಯೇ ಪಠಿಸುತ್ತ ಎರಡನೇ ಬಾರಿ ಮತ್ತೆ ಮೂನೇ ಬಾರಿ ಮೊದಲಮಂತ್ರ ಹಾಗೂ ಕಡೆಯ ಮಂತ್ರವನ್ನು ಪೂರ್ಣ ಉಚ್ಚರಿಸಿ ೧೪ ಮಂತ್ರಗಳನ್ನೂ ಹೇಳಿ ಪುನಶ್ಚರಣೆ ಮಾಡಬೇಕು. ಆದ್ಯಂತಗಳಲ್ಲಿ ಸಂಪುಟಾಕಾರವಾಗಿ ಪೂರ್ಣಸೂಕ್ತವನ್ನು ಪಠಿಸಬೇಕು. ಹೀಗೆ ೫ ಬಾರಿ ಮನ್ಯುಸೂಕ್ತದ ಪಠಣೆಗೆ ಬಂದು ಪುನಶ್ಚರಣೆಯಾಗುತ್ತದೆ. ಹೀಗೆ ೧,೩,೭ ಬಾರಿ ಏಳು ದಿನಗಳಲ್ಲಿ ಪಠಿಸಬೇಕು.

ಆದರೆ ಎರಡು ಪಾದಗಳನ್ನು ಸಂಯೋಜಿಸಿ ಪಠಿಸುವಾಗ ಈ ಸ್ವರ ಎಲ್ಲೆಡೆಯೂ ಒಂದೆ ತೆರನಾಗಿರುವುದಿಲ್ಲ.

ಉದಾತ್ತಸ್ವರವನ್ನು ಅನುದಾತ್ತವನ್ನಾಗಿಸಿಯೇ ಹೇಳಬೇಕಾಗುತ್ತದೆ. ಇಲ್ಲದಿದ್ದರೆ ಸ್ವರಸಂಚಾರದ ವ್ಯವಸ್ಥೆಯೇ ಕೂಡುವುದಿಲ್ಲ . ಮತ್ತು ಪದಪಾಠದಲ್ಲಿ ಈ ಸ್ವರಗಳ

ವ್ಯತ್ಯಾಸವೂ ಸಹ ಇದೆ. ಅದಕ್ಕನುಸಾರವಾಗಿ ನಾವು ಸ್ವರವನ್ನು ಹೇಳಬೇಕು. ಇಲ್ಲಿ ಕೊಡಲಾಗಿರುವ ಪುನಶ್ಚರಣೆಯ ಕ್ರಮದಲ್ಲಿ ಇದನ್ನು ಅಳವಡಿಸಲಾಗಿದೆ.

### ಪುನಶ್ಚರಣ ವಿಧಿ

ಪುನಶ್ಚರಣ ವಿಧಿಯನ್ನು ತಿಳಿಸುವ ೪ ಕ್ರಮಗಳು ಹಸ್ತಪ್ರತಿಗಳಲ್ಲಿ ಇಂದು ಕಂಡು ಬರುವುದು. ಆದರೆ ಸಂಪ್ರದಾಯಲ್ಲಿ ಬಂದಿರುವ ಕ್ರಮಕ್ಕೂ ಹಸ್ತಪ್ರತಿಗಳಲ್ಲಿರುವ ಕ್ರಮಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಮಾತೃಕೆಗಳಲ್ಲಿ ವೈಷ್ಣವ ಸಂಪ್ರದಾಯಾನುಸಾರಿಯಾದ ಎರಡು ಕ್ರಮಗಳಿವೆ. ಅದನ್ನು ಮೊದಲಿಗೆ ಕೊಡಲಾಗಿದೆ. ಇವುಗಳಲ್ಲಿ ಬಂದ ಅಂಗನ್ಯಾಸ ಕರನ್ಯಾಸ, ಧ್ಯಾನ ಮಂತ್ರಗಳು ಈಗ ಸಂಪ್ರದಾಯದಲ್ಲಿ ಬಂದಿಲ್ಲ. ಸಂಕಲ್ಪದಲ್ಲಿ ವ್ಯತ್ಯಾಸವಿಲ್ಲ. ಪುನಶ್ಚರಣೆಯಲ್ಲಿ ಮಾತ್ರ ಮಂತ್ರದಲ್ಲಿ ಕೆಲವುಕಡೆ ಕಡೆಯ ಮಂತ್ರದ ಕಡೆಯ ಪಾದವನ್ನು ಹೇಳುವಾಗ 'ಪರಾಜಿತಾಸೋ ಅಪನಿಲಯಂತಾಂ' ಎಂದು ಎರಡು ಹಸ್ತಪ್ರತಿಗಳಲ್ಲಿ ಮತ್ತೆರಡರಲ್ಲಿ 'ಶತ್ರವಃ ಪರಾಜಿತಾಸೋ ಅಪನಿಲಯಂತಾಮ್' ಎಂದೂ ಕಂಡುಬರುತ್ತದೆ. 'ಶತ್ರವಃ.......' ಎಂದು ಶತ್ರುಶಬ್ದವನ್ನು ಸೇರಿಸಿಕೊಂಡು ಹೇಳುವುದು ಸಂಪ್ರದಾಯದಲ್ಲಿದೆ.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶ - ಈಗ ಚಾಲ್ತಿಯಲ್ಲಿರುವ ಪುನಶ್ಚರಣೆಯಲ್ಲಿ ಪಾದಶಃ ಪಠಣೆ ಮಾಡುವಾಗ ಪಾದಾಂತ್ಯದ ಶಬ್ದಗಳ ಸ್ವರವನ್ನು ಯಥಾ ಕ್ರಮದಲ್ಲಿಯೇ ಉಚ್ಚರಿಸಲಾಗುತ್ತದೆ.

### ಪುನಶ್ಚರಣೆ ಮಾಡುವಾಗ ಇರಬೇಕಾದ ಚಿಂತನೆ ಹೀಗೆ.

ನಾವು ಭಗವಂತನನ್ನು ಹೇಗೆ ಉಪಾಸನೆ ಮಾಡುತ್ತೇವೋ ಅದರಂತೆ ನಮಗೆ ಆ ಗುಣಗಳನ್ನು ಭಗವಂತನ ದಯಪಾಲಿಸುವನು. 'ಪ್ರತಿಮುಖಸ್ಯ ಯಥಾ ಮುಖಶ್ರೀಃ' ಆದ್ದರಿಂದ 'ವೇಧಾದ್ಯರ್ಥಭೇದಾತ್' ಎಂಬ ಸೂತ್ರದಲ್ಲಿ ಹೇಳಿದಂತೆ ಸಜ್ಜನರಿಗೆ ಕಷ್ಟ ಬಂದೊದಗಿದಾಗ ಅದರ ಪರಿಹಾರಕ್ಕಾಗಿ ಭಗವಂತನಲ್ಲಿ ಪ್ರಾರ್ಥನೆ ಮಾಡುವುದು ಕರ್ತವ್ಯ. ಅಂತಹ ಸಮಯದಲ್ಲಿ ದೇವತೆಗಳಿಗೆ ಹಿರಣ್ಯಕಶಿಪುವಿನಂತಹ ಶತ್ರುಬಾಧೆಯನ್ನು ಪರಿಹರಿಸಿದ ಶ್ರೀನರಸಿಂಹದೇವರ ಪ್ರಾರ್ಥನೆ ಈ ಸೂಕ್ತದಿಂದ ತಿಳಿಯುತ್ತದೆ. ಹೀಗೆ ಲೌಕಿಕವಾದ ಕಾರ್ಯಗಳಿಗೆ ಆಭಿಚಾರಿಕ ಕಾರ್ಯಗಳಿಗೆ ಇದನ್ನು ಭಗವದ್ಭಕ್ತರು ಮಾಡಬಾರದು.

ಕಡೆಯದಾಗಿ ಮಂತ್ರಗಳನ್ನು ಬೃಹದ್ದೇವತೆಯಲ್ಲಿ ಶೌನಕರು ೪೬ ತೆರನಾಗಿ

ವಿಂಗಡಿಸಿದ್ದಾರೆ. ಅದರಲ್ಲಿ ಪ್ರಧಾನವಾಗಿ ಯಾಸ್ಕರು ಹತ್ತು ರೀತಿಯಾಗಿ ವಿಭಾಗ ಮಾಡಿರುವರು. ದೈವತ ಮಂತ್ರಗಳು  ಪರೋಕ್ಷಕೃತ, ಪ್ರತ್ಯಕ್ಷಕೃತ, ಆಧ್ಯಾತ್ಮಿಕ ಎಂಬ ಮೂರುವಿಧ .

ಇದರಂತೆ

ಸ್ತುತಿ = ಪ್ರಾರ್ಥನಾತ್ಮಕವಾದ ಮಂತ್ರ.

ಆಶೀರ್ಮಂತ್ರ = ಆಶೀರ್ವಾದಾತ್ಮಕವಾದದ್ದು.

ಶಪಥ = ಪ್ರತಿಜ್ಞಾತ್ಮಕ,

ಅಭಿಶಾಪ = ಶಾಪಕೊಟ್ಟ ವಿಷಯ ತಿಳಿಸುವಮಂತ್ರ,

ಕಸ್ಯಚಿದ್ಭಾವ ಮಂತ್ರ = ತತ್ತ್ವನಿರೂಪಣಾತ್ಮಕವಾದದ್ದು.

ಪರಿದೇವನಾ = ಸಂತಾಪಾತ್ಮಕವಾದದ್ದು. ನಿಂದಾ ಪ್ರಶಂಸಾತ್ಮಕವಾದದ್ದು ಕಡೆಯದು.

೧. ದೈವತಮಂತ್ರದಲ್ಲಿ ಪರೋಕ್ಷಕೃತ [ಪರೋಕ್ಷವಾಗಿರುವ] ದೇವತೆಯನ್ನು ಉದ್ದೇಶಿಸಿ ಸ್ತೋತ್ರಮಾಡುವುದು. ಈ ಸಮಯದಲ್ಲಿ ದೇವತಾವಾಚಕ ಶಬ್ದವು ಸರ್ವನಾಮ ವಿಭಕ್ತಿಯಲ್ಲಿ ಯಾವುದೂ ಆಗಬಹುದು. ಆದರೆ ಕ್ರಿಯಾಪದವು ಮಾತ್ರ ಪ್ರಥಮಪುರುಷದಲ್ಲೇ ಇರಬೇಕು. 'ತತ್ರ ಪರೋಕ್ಷಕೃತಾಃ ಸರ್ವಾಭಿಃ ನಾಮ ವಿಭಕ್ತಿಭಿಃ  ಯುಜ್ಯಂತೇ, ಪ್ರಥಮ ಪುರುಷೈರಾಖ್ಯಾತಶ್ಚ ' ಮನ್ಯುಸೂಕ್ತದ ಎರಡನೇ ಮಂತ್ರದಲ್ಲಿ 'ಮನ್ಯುರೇವಾಸದೇವಃ ' ಎಂದು ಪ್ರಯೋಗವಿದೆ.

ಪ್ರತ್ಯಕ್ಷಕೃತ ಮಂತ್ರದಲ್ಲಿ ಎದುರಿಗೆ ಇದ್ದಾಗ ಸ್ತುತಿಸುವಂತೆ ದೇವತೆಯನ್ನು ಯಾವ ಶಬ್ದದಿಂದಾದರೂ ಸ್ತುತಿಸಬಹುದು. ಆದರೆ ಕ್ರಿಯಾಪದವು ಮಧ್ಯಮ ಪುರುಷದಲ್ಲಿರಬೇಕು. ಉದಾಹರಣೆಗೆ 'ಅಭೀಹಿ ಮನ್ಯೋ'  , 'ತ್ವಂ ಹಿ ಮನ್ಯೋ' ಎಂಬಲ್ಲಿ 'ತ್ವಮ್ ಅಭೀಹಿ' , 'ಜಹಿ' , 'ಏಧಿ' ಮುಂತಾದ ಕ್ರಿಯಾಪದಗಳು ಮಧ್ಯಮಪುರುಷದಲ್ಲಿವೆ.

ಮತ್ತೆ ಕೆಲವು ಮಂತ್ರಗಳು ಪ್ರತ್ಯಕ್ಷಕೃತ ಪರೋಕ್ಷಕೃತ ಎರಡೂ ಆಗುತ್ತದೆ. ಆಗ ಸರ್ವನಾಮಶಬ್ದಗಳು ಪ್ರಥಮಾ ವಿಭಕ್ತಿಯಲ್ಲಿ ಹಾಗೂ ಕ್ರಿಯಾಪದಗಳು  ಪ್ರಥಮ-ಪುರುಷದಲ್ಲೇ ಇರುತ್ತದೆ. ಘರ್ಮಸೂಕ್ತದ ೫ನೇ ಮಂತ್ರ, ಸುಪರ್ಣಂ ವಿಪ್ರಾಃ ಕವಯೋ. ..ಕಲ್ಪಯಂತಿ' ಹಾಗೂ ೭ ನೇ ಮಂತ್ರಗಳು ಇದಕ್ಕೆ ಉದಾಹರಣೆ.

ಆಧ್ಯಾತ್ಮಿಕದ ಮಂತ್ರ ಲಕ್ಷಣವನ್ನು ಹೇಳುವಾಗ - ''ಅಥಾಧ್ಯಾತ್ಮಿಕಾ ಉತ್ತಮ

ಪುರುಷಪ್ರಯೋಗಾ ಅಹಮಿತಿ ಚೈತೇನ ಸರ್ವನಾಮ್ನಾ' ಎಂದಿದ್ದಾರೆ. 'ಯಾರು ಸ್ತೋತ್ರ ಮಡುತ್ತಾರೋ ಅವರು ತಮ್ಮನ್ನು ಮಂತ್ರದಲ್ಲಿ ಸೇರಿಸಿಕೊಂಡು ದೇವತೆಯನ್ನು ಸ್ತುತಿಸುವರು. ಘರ್ಮಸೂಕ್ತದಲ್ಲಿ 'ತಂ ಪಾಕೇನ ಮನಸಾ ಅಪಶ್ಯಮ್' ಎಂದು ಕ್ರಿಯಾಪದದಿಂದ 'ಅಹಂ' ಶಬ್ದದ ಅಧ್ಯಾಹಾರ ತಿಳಿದು ಬರುತ್ತದೆ.

ಸ್ತುತಿ - 'ಮನ್ಯುರ್ಹೋತಾ ವರುಣೋ ಜಾತವೇದಾಃ 'ಎಂದು ನಾನಾ ವಿಶೇಷಣಗಳಿಂದ ಸ್ತೋತ್ರಮಾಡಿರುವುದು.

ಶಪಥ = ಪ್ರತಿಜ್ಞೆ 'ದ್ಯುಮಂತಂ ಘೋಷಂ ವಿಜಯಾಯ ಕೃಣ್ಮಹೇ' 'ಸಿಂಹನಾದ ಮಾಡುತ್ತೇವೆ 'ಎಂದು ಪ್ರತಿಜ್ಞೆ.

ಅಭಿಶಾಪ = ಶತ್ರುಗಳು ನಾಶವಾಗಲಿ, ಅಥವಾ ಅವರಿಗೆ ಇಂತಹ ತೊಂದರೆಯಾಗಲಿ ಇತ್ಯಾದಿಯಾಗಿ ಅರ್ಥಕೊಡುವಂತ ಮಂತ್ರ. ಋಗ್ವೇದ ಖಿಲದಲ್ಲಿ - ಆಸ್ತೀಕ ಋಷಿಯ ಮಾತನ್ನು ಕೇಳಿಯೂ ಸರ್ಪವು ಹೋಗದೇ ಇದ್ದರೆ ಅದರ ತಲೆ ಸಾವಿರ ಹೋಳಾಗುವುದು ಎನ್ನುವ ಮಾತಿದೆ. ಅದರಂತೆ ಮನ್ಯುಸೂಕ್ತದಲ್ಲಿ ಪ್ರಾಯಃ ಎಲ್ಲ ಮಂತ್ರಗಳಲ್ಲಿಯೂ, ಶತ್ರುನಾಶ, ಅವರ ಧನಾಪಹಾರ ಮುಂತಾದ್ದರ ವರ್ಣನೆಯಿದೆ.

ಕಸ್ಯಚಿದ್ಭಾವ = ವಸ್ತು ವರ್ಣನೆ ಅಥವಾ ತತ್ತ್ವನಿರೂಪಣೆ - ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್ ಎಂದು ವೇದದ ವ್ಯಾಪ್ತಿಯ ನಿರೂಪಣೆ.

ಪರಿವೇದನಾ. - 'ಅಭಾಗಃ ಸನ್' ಎಂಬ ಮಂತ್ರದಲ್ಲಿ ಭಗವಂತನನ್ನು ತ್ಯಾಗ ಮಾಡಿ ಸಾಧಕನು ತೊಂದರೆಗೊಳಗಾದ್ದರ ವಿವರಣೆ ಬಂದಿದೆ.

ಹೀಗೆ ಮಂತ್ರಗಳು ಅನೇಕ ವಿಧವಾಗಿದ್ದರೂ ಪ್ರಧಾನವಾಗಿ ಎಲ್ಲ ಮಂತ್ರಗಳೂ ಎಲ್ಲ ಶಬ್ದಗಳು ಎಲ್ಲ ಕ್ರಿಯಾಪದಗಳೂ ಎಲ್ಲವೂ ಭಗವದ್ ವಾಚಕವೇ. ಅವಾಂತರವಾಗಿ ಕರ್ಮಾದಿಗಳನ್ನೂ ಸಹ ಹೇಳುತ್ತವೆ ಎಂದು ಶ್ರೀಮದಾಚಾರ್ಯರ ಸಿದ್ಧಾಂತದ ರಹಸ್ಯ.

ಇತಿ ಸಜ್ಜನವಿಧೇಯ

ಸಿ.ಆರ್.ಪ್ರದೀಪಸಿಂಹಾಚಾರ್ಯ

॥श्रीहनुमद्भीममध्वान्तर्गतनरहरिरामकृष्णवेदव्यासाय नमः ॥

# श्रीमन्युसूक्तम्

## श्रीमद्धीरेन्द्रतीर्थीयव्याख्या

मङ्गलाचरणानि –

श्रीमदानन्दतीर्थार्यहृदयाम्भोजवासिनौ ।
पद्मराधितपादाब्जौ व्यासरामौ नमाम्यहम् ॥ १॥
श्रीराघवेन्द्रार्यगुरून् नत्वा वादीन्द्रदेशिकान् ।
करिष्ये मन्युसूक्तार्थसङ्ग्रहं बुद्धिशुद्धये ॥ २ ॥

'यस्ते मन्यो' 'त्वया मन्यो' इति चतुर्दशर्चस्य सूक्तस्य तापसपुत्रो मन्युरृषिः, मन्युनामा मन्य्वन्तर्गतश्रीनृसिंहो देवता, तत्राद्या अन्त्याश्चतस्रश्च जगत्यः, अन्या नव त्रिष्टुभः , सर्वशत्रुनिवारणार्थे विद्याप्राप्त्यर्थे[1] विनियोगः ।

तदुक्तमन्यत्र[2] –

"यस्ते मन्यो त्वया मन्यो इति सूक्तद्वयस्य च ।
तापसस्य सुतो मन्यु ऋषिराद्योऽवमः स्मृतः ॥ १ ॥
मन्युनामा नृसिंहो वै देवताऽत्र प्रकीर्तिता ।
ऋगाद्या जगती प्रोक्ता द्वितीयाद्या ऋचो नव ॥ २॥
त्रिष्टुभोऽन्त्याश्चतस्रश्च जगत्योऽत्र ऋचो मताः "

( इति[3] ) इत्यादि ॥

---

१. पं – नास्ति
२. अन्यैः -पां
३. पं

श्रीश्रीकृष्णावधूतपण्डितकृता

# श्रीमन्युसूक्तव्याख्या – मन्दबोधिनी

## मङ्गलाचरणम्

**रामपादपयोजातपरागमहमाश्रये ।**
**श्रुतिसीमन्तिनीकान्तशिरःसीमन्तसन्ततम् ॥१॥**
**यः सदा शुकविख्यातं पुत्रं प्राप महायशाः ।**
**तं व्यासं मम तातं च वन्दे सन्देहधूतये ॥२॥**[1]
**व्याख्यास्ये मन्युसूक्तं च न पाण्डित्याभिमानतः ।**
**किन्तु श्रीहनुमद्हृस्थश्रीरामप्रीतिभूतये ॥३॥**
**शीघ्रबोधाय मन्दानां लिख्यतेऽत्र यथोचितम् ।**
**निरुक्तिपदकल्पादिविस्तरान्नात्र कथ्यते ॥४॥**

## पीठिका

'यस्ते मन्यो' इत्यष्टमस्य तृतीयेऽध्याये अष्टादशो वर्गः । सप्तर्च सूक्तम् । अस्य सूक्तस्य मन्युनामा तापसपुत्रो ऋषिः । आञ्जनेयान्तर्गतवीरराघवो देवता ।

तत्राद्याया ऋचः जगती च्छन्दः, ततः षण्णामृचां त्रिष्टुप् च्छन्दः । दाशरथिरामषडक्षरन्यासः[2] । 'श्यामं रवीन्दु'[3] इति ध्यानम् ।

---

१. इदमेव मङ्गलाचरणमीशावास्यभाष्यव्याख्याने दृश्यते

२. ॐ रां हृदयाय नमः । ॐ रामाय शिरसे स्वाहा । ॐ नमः शिखायै वषट् । ॐ रां कवचाय हुम् । ॐ रामाय नेत्राभ्यां वौषट् । ॐ नमः अस्त्राय फट् । ॐ इति दिग्बन्धः ॥

३. श्यामं रवीन्द्वमितदीधितिकान्तियुक्तं ज्ञानं शरं च दधतं प्रियया समेतम् ।

"धनविद्याप्रदं सूक्तं शत्रुसंहारकारकम् ।
पठेत् सहस्रवारं यः स तत्फलमवाप्नुयात् ॥"
इति स्मृत्युक्तं फलं बोध्यम् ॥

**हनुमत्पक्षे –**

"आञ्जनेयो रुद्रमूर्तिर्वायुपुत्रस्तथैव च ।
अग्निगर्भो रामदूतो ब्रह्मास्त्रविनिवारणः ॥
एतैर्ङेऽन्तैः[1] षडङ्गानि..."
(मन्त्रमहोदधौ -त्रयोदशतरङ्गे -८७,८८ श्लोकौ )

इति सुदर्शनसंहितोक्तन्यासः[2] । ध्यानं च - 'दहनतप्त'[3] इत्यादि । अन्यत् पूर्ववत् ॥

तत्र आद्या ऋक् -**यस्ते इति** ॥

**संहिता**

**यस्ते॑ म॒न्योऽवि॑धद्वज्रसायक॒**
**सह॒ ओजः॑ पुष्यति॒ विश्व॑मानु॒षक् ।**
**सा॒ह्याम॒ दास॒मार्यं॒ त्वया॑ यु॒जा**
**सह॑स्कृतेन॒ सह॑सा॒ सह॑स्वता ॥१॥**

---

स्वात्मस्वरूपममितं हनुमन्मुखेषु सन्दर्शयन्तमजितं स्मरतोरुगीर्भिः ॥ – त.सा.सं

१. ॐ आञ्जनेयाय हृदयाय नमः । ॐ रुद्रमूर्तये शिरसे स्वाहा । ॐ वायुपुत्राय शिखायै वषट् । ॐ अग्निगर्भाय कवचाय हुम् । ॐ रामदूताय नेत्राभ्यां वौषट् । ॐ ब्रह्मास्त्रविनिवारणाय अस्त्राय फट् । ॐ इति दिग्बन्धः ॥

२. सुदर्शनसंहिता नोपलब्धा

३. दहनतप्तसुवर्णसमप्रभं भयहरं हृदये विहिताञ्जलिम् ।
श्रवणकुण्डलशोभिमुखाम्बुजं नमत वानरराजमिहाद्भुतम् ॥
इति मन्त्रमहोदधौ -त्रयोदशतरङ्गे -८९ श्लोकः

पदपाठः- **यः । ते[1] । मन्यो इति । अविधत् । वज्र । सायक । सहः । ओजः । पुष्यति । विश्वम् । आनुषक् । सह्याम । दासम् । आर्यम् । त्वया । युजा । सहःऽकृतेन । सहसा । सहस्वता ॥१॥** (एकोनविंशतिपदानि)

सायणभाष्यम् -

(१) 'यस्ते मन्यो' इति सप्तर्चं पञ्चदशं सूक्तम् । मन्युर्नाम तपसः पुत्र ऋषिः । आद्या जगती शिष्टास्त्रिष्टुभः । इदमुत्तरं च मन्युदैवतम् । तथा चानुक्रान्तम् । 'यस्ते मन्यो मन्युस्तापसो मान्यवं तु जगत्यादि' इति ॥ अजिरनाम्न्यभिचारसाधने यज्ञ एतत्सूक्तं निविद्धानम् । सूत्रितं च 'त्वया मन्यो 'यस्ते मन्यो' इति ॥ हे मन्यो क्रोधाभिमानिन् देव । मन्युः 'मन्यतेर्दीप्तिकर्मणः क्रोधकर्मणो वधकर्मणो वा' इति निरुक्तम् । यो यजमानस्ते तुभ्यमविधत् परिचरति हे वज्र वज्रवत्सारभूत सायक सायकवच्छत्रूणां हिंसक स मनुष्यः सहो बलं बाह्यमोजः शारीरं बलं चानुषगनुषक्तं पुष्यति त्वदनुग्रहात्सङ्ग्रामे । यस्मादेवं तस्माद्वयं दासमुपक्षयकर्तारमार्यमस्मत्तोऽधिकं चोभयविधं शत्रुं साह्याम । अभिभवेम । केन साधनेनेति तदुच्यते । त्वया युजा त्वया सहायेन । सहायो विशेष्यते । सहस्कृतेन बलोत्पादितेन सहसा सहमानेन परान् सहस्वता बलवता । ईदृशेन त्वया सहायेनेत्यर्थः ॥ १ ॥

**धीरेन्द्रीया - तत्राद्य ऋगर्थः[2] यस्ते मन्यो इति[3], हे अविधद्वज्रसायक, अविधत् धृतः, अविद्धो वा वज्रसदृशः सायकः नन्दकाख्यखड्गो बाणो[4]**

---

१. (अ)'ते षष्ट्यर्थोऽनुदात्तः स्यादुदात्तो बहुवाग्भवेत्' इति ऋग्भाष्ये ॥
'ते षष्ट्यतोनुदात्तः स्यादुदात्तो बहुवाचकः ।' (१-१४-८)
(आ) द्र० 'अनुदात्तं सर्वमपादादौ'(पा.सू.८-१-१८)इति हि पाणिनिसूत्रम्.

२. पं -अधिकम् । ३. पं -नास्ति । ४. शारो – पां

**वा यस्य स तथोक्तः । 'शरे खड्गे च सायकः' इत्यभिधानात् । हे मन्यो क्रोधाभिमानिरुद्रान्तर्गत, क्रत्वभिमानीन्द्रातर्गत[1], ज्ञानरूपत्वान्मन्युनामक श्रीनृसिंह । 'मन्युर्दैन्ये क्रतौ क्रुधि ' इत्यभिधानात् । 'मनु अवबोधने' इत्यतो 'यजिमनिशुन्धिदसिजनिभ्यो युच्' इति युच्प्रत्यये मन्युरिति सिध्यति । निरुक्तावपि 'मनुतेर्दीप्तिकर्मणः क्रोधकर्मणः [2]वधकर्मणो वा' इत्युक्तम् । ते तव । यत् सहः बलं, ओजः प्रभावः दीप्तिर्वा । 'ओजः प्रभावे दीप्तौ च' इति कोशात् । विश्वं प्रपञ्चम् आनुषक् अनुषक्तं सम्बद्धं सत् । पुष्यति पुष्णाति । 'पुष पुष्टौ' इति धातोः । विकरणव्यत्ययः छान्दसः । सहस्वता बलवता सहनवता वा । 'सहो बलं सहो मार्गः' इत्यभिधानात् । सहस्कृतेन बलकर्त्रा त्वया युजा युक्तेन । सहसा बलेन सैन्येन वा । दासं नीचम् ,आर्यं महान्तम् । 'शत्रुम् ' इति शेषः । साह्याम सहामः । निराकुर्म इत्यर्थः । उत्तमपुरुषप्रयोगात् 'वयम् ' इति कर्ता लभ्यते । इति प्रथमऋगर्थः ॥१॥**

**व्याख्या -** हे **वज्रसायक** वज्रसदृशो सायको बाणो यस्य स तथा । **मन्यो** क्रोधाभिमानिन् रामभद्र । ''यजिमनिशुन्धिदसिजनिभ्यो युच्''[3] इति युच् । ''मन्यतेर्दीप्तिकर्मणः क्रोधकर्मणो वा वधकर्मणो वा''[4] इति निरुक्तिकारो **यास्कः** । **यः** पुमान् **ते** तव । कर्मणि षष्ठी । **अविधत्** परिचचार,सः यजमानः **विश्वं** स्वसम्बन्धि स्वीयसैन्यसम्बन्धि चेति

---

१. पं - नास्ति

२. पं -'बन्ध' , 'सम्बन्ध' इति च पाठ अपपाठः

३. उणादि.सू.३००

४. इतः परम् -''मनन्ति अस्मात् इषवः'' – इति अधिकभागः

– निरुक्ते दशमाध्याये-२९खण्डे पृ-८६२

''मन्युः -'मन्यतेः' क्रोधार्थस्य दीप्त्यर्थस्य वा । उभयमप्युपपद्यते । बलवत्वान्मध्यमस्य'' इति दुर्गादासः ॥(पृ-८६३)

समस्तम् । **सहः** बलम् **ओजः**[1] अवष्टम्भसामर्थ्यम् । **आनुषक्** आनुपूर्व्येण[2] । स्वरादिगणस्याकृतिगणत्वेन तन्मध्ये पाठमङ्गीकृत्य 'आनुषक्' इत्यव्ययम् । **पुष्यति** पोषयति । तस्माद्धेतोः । **सहसा** अकस्मात् मदीयदैववशात् प्रसन्नेनेत्यर्थः । **सहस्वता** बलवता । **सहस्कृतेन** ज्योतिषा पर्याप्तेन **युजा** मत्सहायार्थं सङ्गतेन **त्वया** समन्तात् गजमिव स्थितम् **आर्यम्** अरिसमूहं बाह्याभ्यन्तरशत्रुमित्यर्थः । **साह्याम** अधिकमभिभवेम ।

''संहितायां तु दैर्ध्यादिरुक्ताधिक्ये पदेऽन्यथा ।
अनन्यार्थत्वविज्ञप्त्यै'' (ऋग्भाष्ये-१-२-२-८)

इत्युदीरितत्वात् 'सा'इति दीर्घः ॥

हनूमत्पक्षे - रामसेवासमासक्तहनूमच्चरणाम्बुजम् ।
हंससेव्यं लसेन्नित्यं मम मानसमानसे ॥

'यस्ते' इति ॥ **वज्रसायक** नखरूपबाण[3] ।

''वज्रं घृते नखे बाणे हीरके च पवौ वने'' इति ॥ ''सायको अस्त्रम् । शरे खड्गे'' इति च निघण्टुः । **मन्यो** दीप्तिमन् । शत्रुवधकारिन् इति वा । हे हनूमन् ॥ अन्यत् पूर्ववत् ॥१ ॥

ಪ್ರತಿಪದಾರ್ಥ :- [೧] ಹೇ ವಜ್ರಸಾಯಕ = ವಜ್ರಸದೃಶವಾದ ಬಾಣವನ್ನು ಧರಿಸಿರುವ, ಮನ್ಯೋ = ಕ್ರೋಧನಿಯಾಮಕನಾದ ಎಲೈ ರಾಮನೇ, ಯಃ = ಯಾವ ಪುರುಷನು, ತೇ = ನಿನ್ನನ್ನು , ಅವಿಧತ್ = ಸೇವಿಸುತ್ತಾನೋ ಅಂತಹ ಯಜಮಾನನು, ವಿಶ್ವಮ್ = ತನ್ನ ಸಂಬಂಧಿಯಾದ, ತನ್ನ ಸೈನ್ಯ ಸಂಬಂಧಿಯಾದ

---

१. ''ओजः इच्छामात्रेण विचित्रतरपदार्थसर्जनशक्तिः''
– इति धीरेन्द्रतीर्थीये म.ना.उ.व्या -अनु १५

२. 'आनुषक् सर्वतः' इति ऋग्भाष्यम् १-१३-५
'आनुषक् स्यादानुपूर्व्ये' – इति वैदिककोषे

३. 'पञ्चात्मको मारुत एव बाणः' – म.भा.ता.नि.

ಎಲ್ಲವನ್ನು, ಸಹಃ = ಬಲವನ್ನು, ಓಜಃ = ಅವಷ್ಟಂಭನ ಶಕ್ತಿಯನ್ನು, ಆನುಷಕ್ = ಎಲ್ಲ ರೀತಿಯಿಂದ, ಪುಷ್ಯತಿ = ಪೋಷಣೆ ಮಾಡುತ್ತಾನೆ. ಆ ಕಾರಣದಿಂದ, ಸಹಸಾ = ಅಕಾಸ್ಮಾತ್ತಾಗಿ, ನನ್ನ ಅದೃಷ್ಟದಿಂದ ಪ್ರಸನ್ನನಾದ, ಸಹಸ್ವತಾ = ಬಲಿಷ್ಟನಾದ, ಸಹಸ್ಕೃತೇನ = ಕಾಂತಿಯುಕ್ತನಾದ, ಯುಜಾ = ನನ್ನ ಸಹಾಯಕ್ಕಾಗಿ ನನ್ನೊಡನೆ ಬಂದಿರುವ, ತ್ವಯಾ = ನಿನ್ನಿಂದ ಸಹಿತವಾಗಿ, ದಾಸಮ್ = ನೀಚವಾದ ಎಲ್ಲ ಕಡೆಯೂ ಆನೆಯಂತೆ ನಿಂತಿರುವ ಆರ್ಯಮ್ = ಶತ್ರುಸಮೂಹವನ್ನು, ವಯಂ =ನಾವು, ಸಹ್ಯಾಮ = ಚೆನ್ನಾಗಿ ಪರಾಭವಗೊಳಿಸುತ್ತೇವೆ.

## Manyu Sukta

For Yaste -Manyu-twaya etc for fourteen Rks, Manyu son of Tapasa is the Sur (Rishi).

Sree Narasimha, with the name of Manyu, Who is specially present in the seer Manyu, is the God on whom the mind is concentrated and directed.

The first and fourth Riks come under the meter (Jagatee chandas) The remaining nine Riks come under the meter (tristup chandas).

While performing Japa (constant repetition) it should be resolved that the Japa of this Sukta mantra is to beg for the grant of real education (enlightening knowledge) and to do away with the enemies who are with us both internally and externally.

Sree Laxshmee Narasimha is holding a sword called Nandaka and an arrow made of the hardest diamond. He is present in the deity of anger, Rudra, and also in the presiding deity of ritual sacrifices, Indra, having the name of Manyu and is called Manyu.

Oh! Lord Lakshmee Narasimha, Your strength, power and influence protect the universe, nourishing it completely. You

are the strongest. Your patience is immense and immeasurable. And our capacities and capabilities become effective only by Your kind grace. And only by Your kind grace, are we able to put down and destroy the enemies, who are lower and weaker than us, using our servants and friends with their armies. We destroy the powerful enemies by Your kind grace. Kindly bless us with the strength and ability to destroy the strongest enemies confidently.

**संहिता - मन्युरिन्द्रो मन्युरेवास देवो**
**मन्युर्होता वरुणो जातवेदाः ।**
**मन्युं विश ईळते मानुषीर्याः**
**पाहि नो मन्यो तपसा सजोषाः ॥ २ ॥**[1]

पदपाठः – **मन्युः । इन्द्रः । मन्युः । एव । आस । देवः**[2] **। मन्युः । होता । वरुणः । जातऽवेदाः । मन्युं । विशः । ईळते । मानुषीः । याः । पाहि । नः । मन्यो इति । तपसा । सऽजोषाः ॥२॥ (विंशतिपदानि)**

सायणभाष्यम् – अयं मन्युरिन्द्रो मन्युरेव देवः सर्वोऽपि मन्युरेवास ।

---

१. मन्युरिन्द्रो मन्युरेवास देवो मन्युर्होता वरुणो विश्ववेदाः ।
मन्यु ँ विंश ईडते मानुषीर्या अवा नो मन्यो तपसा सजोषाः ॥२॥
इति मैत्रायणीसंहितायां ४-१२-७९ समाख्या ऋक् ॥

२. 'देवः' इत्यत्र स्वरचिन्ता -
(अ) 'चितः' (६-२-१६३) –इति फिट्स्वरेणान्तोदात्तत्वम् ॥
(आ) ''निष्ठा च द्व्यजनात्''(६-१-२०५) निष्ठान्तं द्व्यचूकं सञ्ज्ञायामाद्युदात्तं स्यात् न त्वाकारः । दत्तः । निष्ठा किम् । देवः । पचाद्यन्तः'' ।
– इति रामचन्द्रपण्डितविरचितस्वरप्रक्रियायाम् -(पृ-७४)

